ಕುಸುಮ : ಒಂದು

# ವಿಹಾರ

(ಕಥಾಗುಚ್ಛ)

ಕೆ. ಎನ್. ದೊರೆಸ್ವಾಮಿ

ಮಾರಾಟಗಾರರು :
'ಸಾಹಿತ್ಯ ಮಂದಿರ',
ಜಗನ್ಮೋಹನ ಬಂಗಲೆ ರಸ್ತೆ,
ಮೈಸೂರು.

ಬೆಲೆ ಒಂದು ರೂಪಾಯಿ.

ಸಂಪಾದಕ

ಕೃಷ್ಣಗೋವಿಂದ



ಪ್ರಕಾಶಕರು

ಕರ್ನಾಟಕ ಗ್ರಂಥಪ್ರಕಾಶನ ಸಮಿತಿ,

ಬಸವನಗುಡಿ – ಬೆಂಗಳೂರುನಗರ.

1944

ಮುದ್ರಣಕಾರರು

ಆರ್. ಎಸ್. ಹಬ್ಬು, ಉಷಾ ಪ್ರೆಸ್,

ಮೈಸೂರು.

# ಅ ರ್ಪ ಣೆ

ಅಳಿದ

ನನ್ನ ಒಲವಿನ ತಂಗಿ

ಕಮಲಳಿಗೆ

# ಮುನ್ನುಡಿ

ಹೊಸಗನ್ನಡ ಸಾಹಿತ್ಯಸಮುದಾಯದಲ್ಲಿ ಸಣ್ಣಕತೆಯು ಎಳೆತನದಲ್ಲಿದ್ದರೂ 'ಆನಂದ' ರ 'ಮಾಸ್ತಿ' ಯವರ ಕತೆಗಳಿಂದ ಕನ್ನಡ ಸಣ್ಣಕತೆ ಕಂಗೊಳಿಸುತ್ತದೆ. ಆದರೂ ಮಾಸಪತ್ರಿಕೆಗಳಲ್ಲಿ ಸಾಮಾನ್ಯವಾಗಿ ಬರುವ ಕತೆಗಳನ್ನೇ ಓದಿ ಕನ್ನಡ ಕತೆಯ ಕಲಾಕೌಶಲವನ್ನು ವಿಮರ್ಶಿಸುವುದಾದರೆ ಬಹು ಜನ ಕತೆಗಾರರು ಬರಹಗಳನ್ನು ಅಚ್ಚಿನಲ್ಲಿ ಕಾಣುವ ಚಪಲಕ್ಕಾಗಿಯೇ ಬರೆಯುತ್ತಾರೆಯೋ ಎನಿಸುತ್ತದೆ. ಬಹುಕಾಲ ಬದುಕುವ ಕಥೆಗಳೇ ಅಪೂರ್ವ; ಉತ್ತಮ ಕಥೆಗಳ ಕೊರತೆ ಇದ್ದೇ ಇದೆ.

ಸಣ್ಣಕತೆಗಳಲ್ಲಿ ವಸ್ತು ಪ್ರಧಾನವಾದವು ಕೆಲವು. ಇವುಗಳಲ್ಲಿ ಕತೆಗಾರನು ತನ್ನ ಚಿತ್ತಭಿತ್ತಿಯಲ್ಲಿ ಯಾವುದೋ ವಿಶೇಷ ವಾತಾವರಣದಲ್ಲಿ ಚಿತ್ರಿಸಿಕೊಂಡವ್ಯಕ್ತಿಗಳನ್ನು ಸೃಷ್ಟಿಸಿ ಸನ್ನಿವೇಶ ಪ್ರಭಾವದಿಂದ ಆ ವ್ಯಕ್ತಿಗಳ ಮೇಲೆ ಆಗುವ ಪರಿಣಾಮವನ್ನು ಚಿತ್ರಿಸುತ್ತಾನೆ. ಇಲ್ಲಿ ವ್ಯಕ್ತಿ, ಸನ್ನಿವೇಶದ ಸುಂದರಗಾಳಿಗೆ ಸಿಕ್ಕಿದ ಅಳ್ಳೆಯಂತೆ ಪರದಾಡಿ ವಿಚಿತ್ರವಾದ ಅನುಭವಗಳನ್ನು ಪಡೆಯುತ್ತಾನೆ. ಇನ್ನು ಕೆಲವು ವ್ಯಕ್ತಿಪ್ರಧಾನವಾದುವು. ವ್ಯಕ್ತಿ ತನ್ನ ಸ್ವಸಾಮರ್ಥ್ಯದಿಂದ ಸನ್ನಿವೇಶ ರಚನೆ ಮಾಡಿಕೊಂಡು ತನ್ನ ಉದಾತ್ತತೆ, ಮನೋದಾರ್ಢ್ಯತೆಗಳಿಂದ ಓದುಗರ ಮೆಚ್ಚಿಕೆಗೆ ಪಾತ್ರನಾಗುತ್ತಾನೆ; ಮಾನವ ಸಾಹಸದ ಪ್ರತೀಕನಾಗುತ್ತಾನೆ. ಮತ್ತೆ ಕೆಲವು ಕತೆ ಘಟನಾ ಪ್ರಧಾನವಾಗಿರುತ್ತವೆ. ಇಲ್ಲಿ ವ್ಯಕ್ತಿ ವಿಧಿವಶದಿಂದ ಒಂದು ಘಟನೆಗೆ ಪಕ್ಕಾಗಿ ಅದರ ಪರಿಣಾಮವಾಗಿ ಸುಖವನ್ನೋ ದುಃಖವನ್ನೋ ಅನುಭವಿಸುವನು. ವಸ್ತು,ವ್ಯಕ್ತಿ, ಘಟನೆಗಳಲ್ಲಿ ಯಾವುದೇ ಪ್ರಧಾನವಾದರೂ ಕತೆಯ ಮೇಲ್ಮೆ ಕತೆಗಾರನ ಸಿದ್ಧಿ, ಸಂಸ್ಕೃತಿ, ಮನೋವೃತಿಗಳನ್ನವಲಂಬಿಸುತ್ತದೆ. ಉತ್ತಮ ಕತೆಗಾರನು ತನ್ನ ಕಲೆಯ ನೈಪುಣ್ಯದಿಂದ ಸುಧಾರಕನ ಕೆಲಸವನ್ನೂ ಮಾಡಬಲ್ಲನು. ಸರಳವಾದ ಭಾಷೆ, ಸರಸ ಸಂಭಾಷಣೆ, ಉತ್ತಮವಾದ ವಸ್ತುವಿನ ಆಯ್ಕೆ ಇವುಗಳಿಂದ ಸಣ್ಣ ಕತೆ ಹೆಚ್ಚು ಜನಪ್ರಿಯವಾಗುತ್ತದೆ. ಜನತೆಯ ಪ್ರಗ

ತಿಗೂ ಕಾರಣವಾಗುತ್ತದೆ. ಕತೆಗಾರನಿಗೆ ಸೂಕ್ಷ್ಮವಾಗಿ ಜೀವನವನ್ನು ಅವಲೋಕಿಸುವ ಸಾಮರ್ಥ್ಯವಿದ್ದಂತೆಯೇ ವಿಮರ್ಶನ ಶಕ್ತಿಯೂ, ಆಕರ್ಷಕ ಶೈಲಿಯೂ ಅಗತ್ಯ.

ಸಣ್ಣಕತೆ ಸುಸ್ಪರೂಪದಿಂದ ಕನ್ನಡದಲ್ಲಿ ಕಾಣುತ್ತಿರುವುದು ಪರಭಾಷೆಗಳ ಪ್ರಭಾವದಿಂದ. ಆದುದರಿಂದ ಫ್ರೆಂಚ್, ಜರ್ಮನ್, ಇಂಗ್ಲೀಷ್ ಮುಂತಾದ ಪರಭಾಷಾ ಸಾಹಿತ್ಯಗಳಲ್ಲಿ ಪ್ರಖ್ಯಾತರಾದ ಕತೆಗಾರರ ಉತ್ತಮ ಕತೆಗಳನ್ನು ಆಯ್ದು ಭಾಷಾಂತರಿಸಿಯೋ, ಅನುವಾದಿಸಿಯೋ ಓದುಗರಿಗೆ ರಸವತ್ತಾದ ಕತೆಗಳನ್ನು ಒದಗಿಸುವ ಕರ್ತವ್ಯವು ಇನ್ನೂ ನೆರವೇರಬೇಕಾಗಿದೆ. **ಕರ್ನಾಟಕ ಗ್ರಂಥಪ್ರಕಾಶನ ಸಮಿತಿಯ** ಸೃಷ್ಟಿಯಾದ 'ವಿಹಾರ' ಇಂಥ ಪ್ರಯತ್ನದ ಕುರುಹು.

'ವಿಹಾರ' ದಲ್ಲಿಯ ಎಂಟು ಕತೆಗಳಲ್ಲಿ ಮೊದಲ ಐದು ಕ್ರಮವಾಗಿ ಚೀಣಾ, ಇಂಗ್ಲೆಂಡ್, ಜರ್ಮನಿ, ರಷ್ಯಾ, ಹಂಗೇರಿ ದೇಶದ ಕತೆಗಳು; ಇಲ್ಲಿ ಕಾಣುವುದು ಆ ಕತೆಗಳ ಅನುವಾದವನ್ನು. ಉಳಿದ ಮೂರು ಕತೆಗಳು ಸ್ವತಂತ್ರವಾಗಿ ಬರೆದ ಕತೆಗಳು.

'ವಿಧವೆಯ ಚಂಚಲತೆ' ಯು ಚೀಣಾದೇಶದ ಒಂದು ಸ್ವಾರಸ್ಯವಾದ ಕತೆ. ಇದು ಚಪಲತೆ, ಚಂಚಲತೆ, ಅತೀ ಆತ್ಮವಿಶ್ವಾಸ ಇವುಗಳ ಪ್ರಭಾವದಿಂದ ವಿಚಿತ್ರವಾಗಿ ವರ್ತಿಸುವ ಸ್ತ್ರೀಯರಿಬ್ಬರ ಚಿತ್ರ.

ಈ ಕತೆಯಲ್ಲಿ ನಾವು ಪ್ರಾಚ್ಯಮನೋವೃತ್ತಿಯನ್ನೇ ಕಾಣುತ್ತೇವೆ. ವಿಧವೆಯರ–ಸ್ತ್ರೀಯರ–ಚಂಚಲಸ್ವಭಾವವೇ ಕತೆಯ ವಸ್ತು. ಈ ವಸ್ತುವನ್ನು ಚಿತ್ರಿಸಲು ಅದ್ಭುತ ಅಲೌಕಿಕ ಶಕ್ತಿಯುತನಾದ ಚ್ವಾಂಗನಂತಹ ಅಸಾಧಾರಣ ವ್ಯಕ್ತಿಯ ಸೃಷ್ಟಿ ಆಗಲೇಬೇಕಾಯಿತು. ಒಣಜಂಬದ ಮಾತಿನಲ್ಲಿ ಹುರುಳಿಲ್ಲವೆಂಬುದನ್ನು ಟಿಯಾನಳಿಗೆ ವೇದ್ಯ ಪಡಿಸಲು ಇಂದ್ರಜಾಲವಿದ್ಯೆ ಸಹಾಯಕವಾಗಿ ಒದಗುತ್ತದೆ. ಕತೆ ಸ್ವಾರಸ್ಯವಾಗಿ ಆರಂಭವಾಗಿ ಕುತೂಹಲದಿಂದ ಸಾಗುತ್ತದೆ.

'ಬಾಡಿಗೆಮನೆ' ಯಲ್ಲಿ ಮಗಳನ್ನು ಕಳೆದುಕೊಂಡ ತಾಯ್ತಂದೆಯರು ಆಕೆಯ ಸಂತತಸ್ಮೃತಿಗಾಗಿ ಆಕೆಯು ಜೀವಂತವಾಗಿದ್ದಾಗ ಉಪಯೋಗಿಸಬೇಕಾಗಿದ್ದ ದೊಡ್ಡ ಉಪ್ಪರಿಗೆಯ ಮಹಡಿಯ ಮೇಲಣ ಕೋಣೆಯೊಂದನ್ನು ಆಕೆಗಾಗಿ ಮೀಸಲಾಗಿಡುವರು. ಆ ಕೋಣೆಯಲ್ಲಿ ಆಕೆ ಉಪಯೋಗಿಸುತ್ತಿದ್ದ ಎಲ್ಲ ವಸ್ತುಗಳನ್ನೂ ಚೆನ್ನಾಗಿ, ಚೊಕ್ಕಟವಾಗಿ ಅಣಿಮಾಡಿರುವರು. ಮನೆಯಲ್ಲಿ ವಾಸಮಾಡಲೆಂದು ಹೋಗಿ ವಿಚಾರಿಸಲು ಶ್ರೀಯುತ ಮತ್ತು ಶ್ರೀಮತಿ ಲೋರೆನ್ಸ್‌ರು ಆ ಕೋಣೆಯೊಂದನ್ನುಳಿದು ಮಿಕ್ಕ ಭಾಗವನ್ನು ಬಾಡಿಗೆಗೆ ಕೊಡುವುದಾಗಿ ಹೇಳುವರು. ಈ ಮುದಿ ದಂಪತಿಗಳಿಗೆ ಗತಿಸಿದ ಮಗಳಲ್ಲಿರುವ ಅಪ್ರತಿಮವಾದ ಚಿರವಿಶ್ವಾಸ ಬಹು ಉದಾತ್ತವಾದುದು. ಈ ಕತೆಯೆಲ್ಲವೂ ಎಂದೋ ನಡೆದ ಒಂದು ಘಟನೆಯ ಪರಿಣಾಮವನ್ನೇ ಚಿತ್ರಿಸುತ್ತದೆ.

'ಲಾಯರ ಸೆರೆಮನೆಯ ಜೀವನ' ದಲ್ಲಿ ವ್ಯಕ್ತಿ ಪ್ರಾಧಾನ್ಯತೆಯಿದೆ. ಮನುಷ್ಯನ ಸಾಹಸಕ್ಕೆ ಮೀರಿದ ಕಾರ್ಯ ಬೇರೆ ಇಲ್ಲ ಎಂಬ ಮಾನವಸ್ಥೈರ್ಯವನ್ನು ತೋರುವ ಕತೆ ಇದು. ಶಿಕ್ಷೆಮಾಡುವಾಗ ಜೀವಾವಧಿ ಶಿಕ್ಷೆಮಾಡುವುದು ಒಳ್ಳೆಯದೋ ಮರಣದಂಡನೆ ಒಳ್ಳೆಯದೋ ಎಂಬ ವಿಚಾರ ಬಂದಾಗ ಜೀವಂತನಾಗಿದ್ದರೆ ಎಂದಾದರೂ ಉತ್ತಮನಾಗಿ ಬಾಳಬಹುದಾದುದರಿಂದ ಮರಣದಂಡನೆಗಿಂತ ಜೀವಾಂತ ಶಿಕ್ಷೆ ಮೇಲು ಎಂದು ಹೇಳಿ ಅದನ್ನು ಸ್ಥಿರಪಡಿಸಲು ಹದಿನೈದು ವರ್ಷಗಳ ಬಂದಿಯಬಾಳನ್ನು ನಡಸಿ ತನ್ನಸಿದ್ಧಾಂತದ ಸತ್ಯತೆಯನ್ನು ಸಾರುವನು. ಆ ತತ್ವವನ್ನು ಪ್ರತಿಭಟಿಸಿದ ಜಹಗೀರದಾರನು ಪ್ರಲೋಭನಕ್ಕೆ ತುತ್ತಾಗಿ ಲಾಯರನ್ನು ಕೊಲೆಮಾಡಲು ಸಿದ್ಧನಾಗಿರುವಾಗ ಲಾಯರ ಕಡೆಯ ಓಲೆ ಸಿಕ್ಕಿ ತನ್ನ ವರ್ತನೆಗಾಗಿ ನಾಚುವನು. ಲಾಯರು ತಮ್ಮ ಉದಾರತೆಯನ್ನು ತೋರಿ ಮಾನವನ ಸುಸ್ವಭಾವದ ಮುಗಿಲ ಮಟ್ಟವನ್ನೇರುತ್ತಾರೆ.

'ವಿಧವೆಯ ಚಂಚಲತೆ' ಹೆಣ್ಣಿನ ಕುಟಿಲತೆಯನ್ನು ವರ್ಣಿಸಿದರೆ "ಕಣ್ಮರೆಯ ಹುಣ್ಣಿಮೆಯಲ್ಲಿ" ಸ್ತ್ರೀತ್ವದ ಉತ್ತಮ ಆದರ್ಶವನ್ನೂ, ಘನತೆಯನ್ನೂ ಕಾಣುತ್ತೇವೆ.

ಶ್ರೀಮಂತ ಮನೆತನದ ಯುವಕನೊಬ್ಬನು ಸಂಶಯ ಪಿಶಾಚಗ್ರಸ್ತನಾಗಿ ತನ್ನ ಸತಿಯನ್ನು ಇರಿದು ಕೊಲ್ಲುವನು. ಆಗ ಆಕೆಯ ಒಂದು ತೊಟ್ಟು ರಕ್ತವು ಅವನ 'ಮುಂಗೈಮೇಲೆ ಬೀಳುವುದು. ಸ್ವಲ್ಪ ಕಾಲಾನಂತರ ಹೆಂಡತಿಯ ಗೆಳತಿಯೊಬ್ಬಳಿಂದ ನಿಜವಾದ ವಿಚಾರ ಹೊರಬೀಳುವುದು. ಆಗ ಅವನಿಗೆ ತನ್ನ ಅಕೃತ್ಯಕ್ಕಾಗಿ ಪಶ್ಚಾತ್ತಾಪವಾಗುವುದು. ತನ್ನ ಹೆಂಡತಿಯ ಪಾತಿವ್ರತ್ಯ, ನಿಷ್ಠೆ, ಸರಳತೆಯ ಅರಿವಾಗಿ ತನ್ನ ಕೃತ್ಯಕ್ಕಾಗಿ ಶೋಕಿಸುವನು. ತೊಟ್ಟು ರಕ್ತ ಬಿದ್ದ ಮುಂಗೈಭಾಗ ಮಾತ್ರ ಅವನಿಗೆ ಬಹಳ ನೋವನ್ನುಂಟುಮಾಡುತ್ತಿತ್ತು. ತನ್ನ ದುಷ್ಕಾರ್ಯಕ್ಕಾಗಿ ಪ್ರಾಯಶ್ಚಿತ್ತವೋ ಎನ್ನುವಂತೆ ಅವನು ಆಗಾಗ್ಗೆ ಶಸ್ತ್ರ ಚಿಕಿತ್ಸೆ ಪಡೆದರೂ ಅವನಿಗೆ ಮನಶ್ಶಾಂತಿ ದೊರೆಯಲಿಲ್ಲ. ಈ ಕತೆ ಕೇವಲ ಒಂದು ಘಟನೆಯ ಪರಿಣಾಮವನ್ನು ಚಿತ್ರಿಸಿದರೂ ಕಥಾಸಂವಿಧಾನವು ನೈಪುಣ್ಯತೆಯಿಂದಲೂ ಕುತೂಹಲವನ್ನುಂಟುಮಾಡುವಂತೆಯೂ ಇದೆ. ಓದುಗನನ್ನು ಬಹುವಾಗಿ ಆಕರ್ಷಿಸುವ ಕಥೆ ಇದು.

ಈ ಎಲ್ಲ ಕಥೆಗಳಲ್ಲೂ ಮಾನವ ಸ್ವಭಾವ, ಮನೋವೃತ್ತಿ ಇವುಗಳ ಸೂಕ್ಷ್ಮ ಅವಲೋಕನವಿದೆ; ನಿರೂಪಣೆಯಿದೆ. ಬೇರೆ ಬೇರೆ ಜನರ ಮನಸ್ಸಿನಲ್ಲಿಯ ವಿವಿಧ ಪರಿಸ್ಥಿತಿಗಳನ್ನು ಚಿತ್ರಿಸುತ್ತವೆ. ಕಥನ ಕಲೆಯ ಆದರ್ಶದ ಕುರುಹನ್ನು ಈ ಕತೆಗಳಲ್ಲಿ ಕಾಣಬಹುದು.

ಉಳಿದುವು ಮಿತ್ರ " ಸಹೋದರ " ರ ಸ್ವಂತ ಕತೆಗಳು.

'ಅನಾಥರಕ್ಷಕ' ದಲ್ಲಿ ದಯಾಹೀನಳಾದ ಅತ್ತೆ, ಆತ್ಮೀಯತೆಗೇರದ ಗಂಡ ಇವರ ಕಿರುಕುಳವನ್ನು ತಡೆಯಲಾರದ ಹೆಣ್ಣು ತವರನ್ನು ಸೇರಿ ಶಾಲೆಗೆ ಹೋಗತೊಡುಗುವಳು. ಇದನ್ನು ಕಂಡು ಗಂಡನು ಕೀಳು ರೀತಿಯಲ್ಲಿ ವರ್ತಿಸಿ ಹೆಂಡತಿಯು ಶಾಲೆಗೆ ಹೋಗುವುದನ್ನು ತಪ್ಪಿಸುವನು. ಆಗ ಸ್ವಯಂ ಪ್ರೇರಣೆಯಿಂದ ಆಕೆ ಮತ್ತೆ ಅತ್ತೆಮನೆ ಸೇರುವಳು. ಹೃದಯಶೂನ್ಯರಾದ, ನಿಷ್ಠುರರಾದ ಅತ್ತೆ ಗಂಡಂದಿರು ; ಇವರ ನಡುವೆ ದಿಕ್ಕು ಕಾಣದ, ನಿಸ್ಸಹಾಯಕಳಾದ, ಯಾತನೆಯ ಜೀವನದಿಂದ ಮುಕ್ತಿಕಾತುರಳಾದ ಸೊಸೆ. ಆಕೆಗೆ ಮುಕ್ತಿ ಸಾವಿನಲ್ಲಿ ಒಂದೇ ಒಂದು. ಆ ಮಾರ್ಗವನ್ನವಳು ಅನುಸರಿಸುವಂತೆ ಪ್ರೇರಿಸಿ, ದುಃಖಸಾಗರದಿಂದ ಮುಕ್ತಳನ್ನಾಗಿ ಮಾಡಿದ

“ ಹೆರರು ತಿಳಿಯದಿರಿತಗಳನು.... ತಿಳಿದು ಸಂತವಿಡುವ ” ಆ ದೇವರು ಅನಾಥ ನಲ್ಲದೆ ಮತ್ತೇನು ? ಈ ಕಥೆಯನ್ನು ಓದುವವರಿಗೆ ಕರುಣೆಯಿಂದ ಕಣ್ಣು ಮಂಜಾಗದೆ ಇರದು. ಇಲ್ಲಿ ನಿರೂಪಣಾ ಮಾರ್ಗವು ಬಹು ಸ್ವಾರಸ್ಯವೂ ಆಕರ್ಷ ಕವೂ ಆಗಿದೆ. ಅವಳ ಕೈಯಿಂದಲೇ ಬರೆಯಲ್ಪಟ್ಟ ಪತ್ರವನ್ನು ಉಪಯೋಗಿ ಸಿರುವ ರೀತಿಯು ಕತೆಗಾರರ ಜಾಣ್ಮೆಯ ನಿದರ್ಶನವಾಗಿದೆ.

ಎರಡನೆಯ ಕಥೆಯಲ್ಲಿ ಚಿಕ್ಕಂದಿನಲ್ಲೇ ಸನ್ಯಾಸವನ್ನು ಸ್ವೀಕರಿಸಿದ ಆನಂದತೀರ್ಥರಿಗೆ ಸಂಸಾರವನ್ನು ತ್ಯಜಿಸಿದ್ದರೂ, ತಾಯಿಯನ್ನು ಕಂಡು ಮಾತನಾಡಿಸಬೇಕೆಂಬ ಹಿರಿಯ ಬಯಕೆ. ಆ ಬಯಕೆಯನ್ನು ಪೂರೈಸು ವುದಕ್ಕಾಗಿಯೇ ಆನಂದತೀರ್ಥರು ಸ್ವಗ್ರಾಮವನ್ನು ಕುರಿತು ಬಿಜಯ ಮಾಡಿದರು. ಸಂಸಾರದ ಜಿಹಾಸೆಯನ್ನು ನೀಗಲು ಕಡೆಯ ತಡೆಯಾ ಗಿದ್ದ ಆ ಆಸೆ ನೆರವೇರಲೆಂದು ನಡುರಾತ್ರಿಯಲ್ಲಿ ನಿದ್ರಿಸುವ ತಾಯಿ ಯನ್ನೇ ಕಂಡು ಮಾತನಾಡಿಸುವರು. ಕನವರಿಕೆಯಲ್ಲೇ ತಾಯಿ ಮಗನ ಮಾತುಗಳಿಗೆ ತಕ್ಕ ಉತ್ತರ ಕೊಡುವಳು. ತಾಯಿ ಎಚ್ಚರಿಕೆಯಿಂದಿದ್ದು ನುಡಿದಳೆಂದು ತಿಳಿದು ಆನಂದ ತೀರ್ಥರು ತೃಪ್ತರಾಗಿ ನಡು ರಾತ್ರಿಯಲ್ಲೇ ಊರುಬಿಟ್ಟು ತೆರಳುವರು.

ಈ ಕತೆಯಲ್ಲಿ ತಾಯಿ-ಮಕ್ಕಳ ಸಂಬಂಧದ ಹೆಚ್ಚಳಿಕೆ ಚಿತ್ರಿತವಾಗಿದೆ.

“ ಎಷ್ಟಾದರೂ ಒಬ್ಬ ತಾಯಿಯ ಮಕ್ಕಳಲ್ಲವೆ ” ಎನ್ನುವ ಕಥೆ ಎಲ್ಲರ ಅನುಭವಕ್ಕೂ ಸಿಗುವ ವಿಷಯವನ್ನೇ ಪ್ರತಿಪಾದಿಸುತ್ತದೆ. ರತ್ನ-ಅಚ್ಯುತರ ಹುಸಿಮುನಿಸು, ಹಾಸ್ಯ, ನಗೆಯಾಟ ಇವುಗಳು ವಿಪರೀತವೆನಿಸಿ ಇವರಲ್ಲಿ ಯಾರೊಬ್ಬರನ್ನು ಹಿರಿಯರು ದಂಡಿಸಿದರೂ ಅವರು ಪರಸ್ಪರ ಸಹಾಯಮಾಡಿ ಹಿರಿಯರಿಗೆ ಕಾಣದಂತೆ ಸುಖವಾಗಿ ಆಡಿಕೊಳ್ಳುವ, ತಿಂಡಿಯನ್ನು ಹಂಚಿಕೊ ಳ್ಳುವ ಪ್ರಸಂಗವೇ ಇದರ ವಸ್ತು. ವಸ್ತು ಲಘುವಾಗಿದ್ದರೂ ನಿರೂಪಣೆ ಚೆನ್ನಾಗಿದ್ದು ಮಕ್ಕಳ ಸಹಜ ಸ್ವಭಾವದ ಚಿತ್ರ ಗೆಲುವಾಗಿದೆ.

ಒಟ್ಟಿನಲ್ಲಿ ‘ ವಿಹಾರ ’ ದಲ್ಲಿಯ ಕತೆಗಳು ರಸಜ್ಞರಿಗೆ ರುಚಿಸದೆ ಇರದು. ಸ್ವಾರಸ್ಯವಾದ ಈ ಕತೆಗಳನ್ನು ಬರೆದಿರುವ ಶ್ರೀ॥ ಕೆ. ಎಸ್. ದೊರೆಸ್ವಾಮಿಗಳಿಗೆ ನಾವು ಋಣಿಗಳಾಗಿರುವೆವು. ಯುವಜನದ ಪ್ರಗತಿಗಾಗಿ

ಶ್ರೀಯುತರು **ಬೆಂಗಳೂರಿನ ಮಿತ್ರಸಂಘದ** ಮೂಲಕವಾಗಿ ದುಡಿಯು ತ್ತಿದ್ದಾರೆ. ಜನತಾ ಸೇವೆಯಲ್ಲಿ ಅವರಿಗಿರುವ ಉತ್ಸಾಹ ಕಾರ್ಯರೂಪ ವಾಗಿ ಸಫಲವಾಗಲೆಂದೂ ಅವರ ಬರೆಯುವ ಕಲೆ ಇಂಬುಗೊಳ್ಳಲೆಂದೂ ಹಾರೈಸುತ್ತೇನೆ.

ಅಲ್ಲದೆ '**ಕರ್ನಾಟಕ ಗ್ರಂಥಪ್ರಕಾಶನ ಸಮಿತಿ**'ಯವರ ಆಸೆಗಳು ಈಡೇರಿ ಸಣ್ಣಕತೆಗಳೇ ಅಲ್ಲದೆ, ವಿಚಾರ ಪೂರ್ಣವಾದ ಇಂದಿನ ಸಮಸ್ಯೆ ಗಳನ್ನು ಕುರಿತ ಚಾರಿತ್ರಕ, ವೈಜ್ಞಾನಿಕ, ರಾಜಕೀಯ ಗ್ರಂಥಗಳೂ ಹೆಚ್ಚು ಹೆಚ್ಚು ಹೊರಬೀಳಲೆಂದು ಆಶಿಸುತ್ತೇನೆ.

**ಪೆಮ್ಮನಹಳ್ಳಿ ರಾಘವೇಂದ್ರ**

*

# ಸಂಪಾದಕೀಯ

ಕನ್ನಡ ಭಾಷೆಯಲ್ಲಿ ಇತ್ತೀಚೆಗೆ ಅತ್ಯುತ್ತಮ ಗ್ರಂಥಗಳು ಹೊರಬೀಳುತ್ತಿವೆ. ಈ ಕೆಲಸದಲ್ಲಿ ನಾವೂ ಭಾಗಿಗಳಾಗಿ ಗ್ರಂಥ ಪ್ರಕಟನೆಯ ಮೂಲಕ ಕೈಲಾದಷ್ಟು ಭಾಷಾಸೇವೆಯನ್ನು ಮಾಡಲು, ನಮ್ಮ ಕೆಲವು ಗೆಳೆಯರಲ್ಲಿ ಮೂಡಿದ್ದ ಭಾವನೆಯು ರೂಪಗೊಂಡು ಇಂದು ಈ '**ಕರ್ನಾಟಕ ಪ್ರಕಾಶನ ಸಮಿತಿ**'ಯ ಸ್ಥಾಪನೆಯಾಯಿತು. ಕಲೆ, ಸಾಹಿತ್ಯ ಮತ್ತು ವೈಜ್ಞಾನಿಕ ಗ್ರಂಥಗಳನ್ನು ಪ್ರಕಟಿಸುವುದೇ ಅಲ್ಲದೆ ವಿಮರ್ಶಕ ದೃಷ್ಟಿಯಿಂದ ಕೂಡಿದ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳನ್ನೊಳಗೊಂಡ ಪುಸ್ತಕಗಳನ್ನೂ ಓದುಗರಿಗೆ ಒದಗಿಸಬೇಕೆಂಬ ಆಸೆಯಿದೆ. ಆದ್ದರಿಂದ ಈ ಕೆಲಸದಲ್ಲಿ ಸಾಹಿತ್ಯಾಭಿಮಾನಿಗಳೂ ಮತ್ತು ಲೇಖಕರೂ ನೆರವಾಗಿ ನಮ್ಮ ಆಸೆ ಆಕಾಂಕ್ಷೆಗಳು ಈಡೇರಲು ನೆರವಾಗಬೇಕೆಂದು ಪ್ರಾರ್ಥಿಸುತ್ತೇವೆ.

ಇಂದು ಸಣ್ಣಕತೆಗಳು ಸಾಕಷ್ಟು ಬಂದಿವೆ. ಆದರೂ ಉತ್ತಮ ಕಥೆಗಳ ಅಭಾವವಿನ್ನೂ ಇದ್ದೇ ಇದೆ. ನಮಗೆ ಇತರ ಭಾಷೆಗಳಲ್ಲಿನ ಉತ್ತಮ ಕಥೆಗಳ ಸಂಗ್ರಹವೊಂದನ್ನು ಪ್ರಕಟಿಸುವ ಇಷ್ಟವಿತ್ತು. ಈ ವಿಚಾರವನ್ನು ನಮ್ಮ ಸಮಿತಿಯ ಹಿತೈಷಿಗಳೂ, ಉತ್ತಮ ಲೇಖಕರೂ ಆದ ಶ್ರೀಮಾನ್ ಕೆ. ಎನ್. ದೊರೆಸ್ವಾಮಿಯವರ ಮುಂದೆ ಹೇಳಿದಾಗ, ಅವರು ಸಂತೋಷದಿಂದ ಮಾಡುವೆನೆಂದು ಭರವಸೆಯಿತ್ತರು. ಅವರು ಸಕಾಲದಲ್ಲಿ ಈ ಕಥಾಸಂಗ್ರಹವನ್ನು ಒದಗಿಸಿ ಕೊಟ್ಟಿರುವುದಕ್ಕಾಗಿ ನಾವು ಅವರಿಗೆ ಋಣಿಗಳು.

ಈ ಗ್ರಂಥ ಪ್ರಕಟನೆಯಲ್ಲಿ ಮೊದಲಿಂದ ಕೊನೆಯವರೆವಿಗೂ ಹಗಲಿರುಳೂ ಸೇವೆ ಸಲ್ಲಿಸಿದ ಮಿತ್ರಸಂಘದ ಉಪಾಧ್ಯಕ್ಷರಾದ ಶ್ರೀಮಾನ್ ಎಚ್.ಎಸ್. ದೊರೆಸ್ವಾಮಿ, ಬಿ.ಎಸ್‌ಸಿ., ಅವರಿಗೆ ನಾವು ಎಷ್ಟು ವಂದಿಸಿದರೂ ಸಾಲದು. ಅವರು ಮುಂದೆಯೂ ನಮ್ಮ ಕಾರ್ಯಗಳಲ್ಲಿ ಅಷ್ಟೇ ಅಭಿಮಾನವಿಟ್ಟಿರಬೇಕೆಂದು ಪ್ರಾರ್ಥಿಸುತ್ತೇವೆ. ಅನೇಕ ಸಂಘಗಳನ್ನು ಕಟ್ಟಿ ಸಾಹಿತ್ಯಕ್ಕಾಗಿ ಬಹಳವಾಗಿ ದುಡಿದ ಮತ್ತು ದುಡಿಯುತ್ತಿರುವ ಶ್ರೀಮಾನ್

ಪೆಮ್ಮನಹಳ್ಳಿ ರಾಘವೇಂದ್ರ ಬಿ. ಎ. ಅವರು ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದು ಕೊಟ್ಟಿರುವುದು ನಮ್ಮ ಭಾಗ್ಯ.

ಈ ಪುಸ್ತಕದ ಸುಂದರವಾದ ರಕ್ಷಾಪತ್ರವನ್ನು ಮಾಡಿಕೊಟ್ಟ ಪರಿಷತ್ತಿನ ಅಚ್ಚುಕೂಟದ ಶ್ರೀ॥ ಆರ್. ಎಸ್. ರಾಮರಾಯರು ಎಂ. ಎ. ಅವರಿಗೂ ಇಷ್ಟು ಅಚ್ಚುಕಟ್ಟಾಗಿ ಪುಸ್ತಕವನ್ನು ಮುದ್ರಿಸಿಕೊಟ್ಟ 'ಉಷಾ' ಪ್ರೆಸ್ಸಿನ ಶ್ರೀ॥ ಆರ್. ಎನ್. ಹಬ್ಬು ಅವರಿಗೂ ನಮ್ಮ ವಂದನೆಗಳು. ಮೊದಲನೆಯ ಕಥೆಗೆ ಸಂಬಂಧಪಟ್ಟ ಚಿತ್ರವನ್ನು ಅಂದವಾಗಿ ಬರೆದು ಕೊಟ್ಟ ಶ್ರೀಮಾನ್. ನಾರಾಯಣ ಅಂಚಿಯವರಿಗೆ ನಮ್ಮ ನೆನಕೆಗಳು. ಕೊನೆಯದಾಗಿ ಈ ಗ್ರಂಥ ಪ್ರಕಟನೆಗೆ ನೆರವಾದ ಎಲ್ಲ ಗೆಳೆಯರಿಗೂ ವಂದಿಸುವುದು ನಮ್ಮಗಳ ಆದ್ಯ ಕರ್ತವ್ಯ.

॥ ತಾರಣ ಸಂ ॥
ಚೈತ್ರ ಶುದ್ಧ ಬಿದಿಗೆ

**ಸಂಪಾದಕ.**

# ಒಂದು ಮಾತು.

ಈ ಕಥಾ ಸಂಕಲನದಲ್ಲಿ ಸೇರಿರುವ ಕಥೆಗಳಲ್ಲಿ ಕೆಲವು ಕಾಲೇಜು ಪತ್ರಿಕೆ, ಜಯಕರ್ನಾಟಕ ಮತ್ತು ಕಥಾಂಜಲಿ ಮುಂತಾದ ಮಾಸ ಪತ್ರಿಕೆಗಳಲ್ಲಿ ಈಗಾಗಲೇ ಬೆಳಕು ಕಂಡಿತ್ತು. ಅವುಗಳೆಲ್ಲವನ್ನೂ ಒಟ್ಟುಗೂಡಿಸಿ ಒಂದು ಪುಸ್ತಕರೂಪವಾಗಿ ಕೊಡುವ ಸಾಹಸ ಮಾಡಿದ ಶ್ರೀ॥ ದೊಡ್ಡಬಳ್ಳಾಪುರದ ಕೃಷ್ಣಮೂರ್ತಿಯವರಿಗೂ ಮತ್ತು ನನ್ನ ಇತರ ಗೆಳೆಯರಿಗೂ ಸಂತೋಷದಿಂದ ನನ್ನ ಕೃತಜ್ಞತೆಯನ್ನು ಸೂಚಿಸುತ್ತೇನೆ.

ಮೊದಲ ಭಾಗದ ಅನುವಾದಿತ ಕತೆಗಳು ಇತರ ಭಾಷೆಗಳಲ್ಲಿ ಪ್ರಖ್ಯಾತ ಲೇಖಕರಾದ ಚೆಕವ್, ಹೆನ್ರಿ ಹೆರಾಲ್ಡ್ ಮುಂತಾದವರ ಕೃತಿಗಳು. ಅವರ ಕತೆಗಳು ಅನೇಕವಿದ್ದರೂ ಇವುಗಳನ್ನು ಆಯುವಾಗ ನನ್ನ ದೃಷ್ಟಿ ಮಾನವನ ಮಾನಸಿಕ ಪರಿವರ್ತನೆಯ ವಿಷಯುಗಳನ್ನು ಒಳಗೊಂಡ ಕತೆಗಳ ಕಡೆಗೇ ಇತ್ತು. ಓದುಗರೂ ಇದೇ ದೃಷ್ಟಿಯಿಂದ ಕತೆಗಳನ್ನು ನೋಡಿದಲ್ಲಿ ರುಚಿಸುವುದೆಂಬ ನಂಬಿಕೆ ನನಗಿದೆ.

ಸಹೃದಯರಾದ ಓದುಗರ ಬೆಂಬಲದಿಂದ "**ಕರ್ನಾಟಕ ಗ್ರಂಥ ಪ್ರಕಾಶನ ಸಮಿತಿ**" ಯವರು ಕೈಕೊಂಡಿರುವ ಕಾರ್ಯ ಅಭಿವೃದ್ಧಿ ಹೊಂದಲೆಂದು ಹಾರೈಸುತ್ತೇನೆ.

ಬಸವನಗುಡಿ. ಬೆಂಗಳೂರು. **ಕೆ. ಎನ್. ದೊರೆಸ್ವಾಮಿ**

# ಮೊದಲನೆಯ ಭಾಗ



‘............ಬೀಸಣಿಗೆಯನ್ನು ಇತ್ತ ಕೊಡಿ. ನಿಮಗೆ ಸಾಕಾಗಿರಬಹುದು. ತಮಗಾಗಿ ನಾನು ಬೀಸುತ್ತೇನೆ.’ ಪುಟ ೨.

(ಚೈನಾದ ಕಥೆ)

# ವಿಧವೆಯ ಚಂಚಲತೆ

ಬಹುಕಾಲದ ಹಿಂದೆ ಇಂದ್ರಜಾಲ ಮಹೇಂದ್ರಜಾಲ ಮುಂತಾದ ಅನೇಕ ಶಾಸ್ತ್ರಗಳಲ್ಲಿ ನೈಪುಣ್ಯವನ್ನು ಪಡೆದಿದ್ದ ಜ್ಞಾನಿ ಚಾಂಗ್ ಮಹಾಶಯನು ಊರ ಹೊರ ವಲಯದಲ್ಲಿ, ನಿಶಾಂತ ನಿಬಿಡದಲ್ಲಿ ಮನೆ ಮಾಡಿದ್ದ. ಈತನು ತನ್ನ ಮೂರನೆಯ ಹೆಂಡತಿಯಾದ ಟಿಯಾನಳ ಸಂಗದಲ್ಲಿಯೂ, ತನ್ನ ಗುರುವಾದ ಲೋಟಾಜನ ಗ್ರಂಥಗಳ ವ್ಯಾಸಂಗದಲ್ಲಿಯೂ ವ್ಯಯಮರೆತಿದ್ದ. ಎಷ್ಟೋ ಜನರಂತೆ ಈತನೂ ತನ್ನ ಯೌವನದಲ್ಲಿ ಸಾಕಷ್ಟು ದಾಂಪತ್ಯ ಜೀವನವನ್ನು ಅನುಭವಿಸಿರಲಿಲ್ಲ. ಕಾರಣ, ಮೊದಲನೆಯ ಹೆಂಡತಿಯು ಮದುವೆಯಾದ ಕೆಲವು ದಿನಗಳಲ್ಲಿಯೇ ಕಾಲವಾದಳು; ಎರಡನೆಯ ಹೆಂಡತಿಯನ್ನು ಆಕೆಯ ಅಯೋಗ್ಯ ವರ್ತನೆಗಾಗಿ ಬಿಡಬೇಕಾಯಿತು. ಇಷ್ಟಾದರೂ ದೇವರು ಕೈಬಿಡಲಿಲ್ಲ. ಯಾವ ದಾಂಪತ್ಯ ಸುಖವನ್ನು ಇದಕ್ಕೆ ಮೊದಲು ಅನುಭವಿಸಲು ಅಸಾಧ್ಯವಾಗಿತ್ತೋ ಅದನ್ನು ಮೂರನೆಯ ಹೆಂಡತಿಯಲ್ಲಿ ಪೂರ್ಣವಾಗಿ ಪಡೆಯುವಂತೆ ಮಾಡಿದ. ಅವನು ಜ್ಞಾನಿ ಯೆಂದು ಮೊದಲೇ ಹೇಳಿದೆನಲ್ಲವೆ? ಮನೆಯಲ್ಲಿ ಬೇಸರವಾದಾಗ ಸುತ್ತ ಮುತ್ತಲಿದ್ದ ಬೆಟ್ಟಗುಡ್ಡಗಳ ಕಡೆಗೆ ವಿಹರಿಸಲು ಹೋಗುವುದು ಅವನ ಪದ್ಧತಿಯಾಗಿದ್ದಿತು. ಒಂದು ದಿನ ಹೀಗೆ ಸುತ್ತಾಡುತ್ತಿರುವಾಗ ಒಂದು ದೃಶ್ಯ ಕಣ್ಣಿಗೆ ಬಿತ್ತು. ಒಂದು ಹೊಸ ಸಮಾಧಿಯ ಬಳಿಯಲ್ಲಿ ಬೀಸಣಿಗೆ ಯಿಂದ ಗಾಳಿ ಬೀಸುತ್ತಾ ಹೆಂಗಸೊಬ್ಬಳು ಕುಳಿತಿದ್ದಳು. ಇಂತಹ ವಿಚಿತ್ರವನ್ನು ವಿಚಾರಮಾಡುವುದು ಚ್ಯಾಂಗ್‌ನಂತ ಜನರಿಗೆ ಸಹಜ ತಾನೆ! ಆಕೆಯ ಬಳಿಗೆ ಹೋಗಿ ಪ್ರಶ್ನಿಸಿದ, "ತಾಯಿ, ಇದೇನು ನೀವು ಮಾಡುತ್ತಿರುವುದು?" ಎಂದು.

"ಇದು ನನ್ನ ಯಜಮಾನರ ಸಮಾಧಿ. ಅವರ ಸ್ವಭಾವ ಸ್ವಲ್ಪ ವಿಚಿತ್ರವಾಗಿದ್ದಿತು. ಅವರ ಸಮಾಧಿಯ ಪಸಿಮೆ ಆರುವವರೆಗೂ ನಾನು ಬೇರೆ ಮದುವೆಯಾಗಬಾರದೆಂದು ಸಾಯುವ ಮೊದಲು ಆಣೆಯಿಟ್ಟು ಸಾರಿದ್ದರು. ಅವರು ಸಮಾಧಿಯಾಗಿ ಬಹುದಿನಗಳಾದರೂ ಅದು ಇನ್ನೂ

ಆರಿಲ್ಲ. ಬೇಗ ಒಣಗಲೆಂದು ಅದರ ಮೇಲೆ ಗಾಳಿ ಬೀಸುತ್ತಿದ್ದೇನೆ." ಎಂದಳು. ಆಕೆಯು ಹೇಳುವುದರಲ್ಲಿ ಸಹಜತೆಯೂ, ಮುಗ್ಧತೆಯೂ ಎದ್ದು ಕಾಣುತ್ತಿದ್ದುವು. ಅದನ್ನು ಕಂಡ ಚ್ವಾಂಗ್‌ನು ಆಕೆಗೆ ಸಹಾಯಕನಾಗಲು ಮನಮಾಡಿ,

"ಎಲ್ಲಿ, ಆ ಬೀಸಣಿಗೆಯನ್ನು ಇತ್ತ ಕೊಡಿ. ನಿಮಗೆ ಸಾಕಾಗಿರ ಬಹುದು. ತಮಗಾಗಿ ನಾನು ಬೀಸುತ್ತೇನೆ" ಎಂದ.

"ಬಹಳ ಸಂತೋಷ ನಿಮ್ಮ ಸಹಾಯಕ್ಕಾಗಿ ನಾನು ತುಂಬಾ ಖುಣಿಯಾಗಿರುತ್ತೇನೆ." ಎಂದಳು ಆಕೆ.

ಚ್ವಾಂಗನು ಬೀಸಣಿಗೆಯನ್ನು ತೆಗೆದುಕೊಂಡು ತನ್ನ ಕೆಲಸದಲ್ಲಿ ಉದ್ಯುಕ್ತನಾದ. ತನ್ನ ತಾಂತ್ರಿಕ ವಿದ್ಯಾಬಲದಿಂದ ಮೂರು ನಾಲ್ಕು ಬಾರಿ ಬೀಸುವುದರಲ್ಲಿಯೇ ಸಮಾಧಿಯು ಪೂರ್ಣವಾಗಿ ಒಣಗುವಂತೆ ಮಾಡಿದ. ಆ ಹೆಂಗಸಿಗೆ ಅತ್ಯಂತ ಹರುಷವಾಯಿತು. ಆತನ ಕಡೆಗೆ ತಿರುಗಿ ನೋಡಿ ಹೇಳಿದಳು, "ಮಹನೀಯರೆ, ನಿಮಗೆ ನಾನು ಎಷ್ಟು ವಂದಿಸಿದರೂ ಸಾಲದು. ಗೌರವವನ್ನು ಸೂಚಿಸುವುದಕ್ಕಾಗಿ ಇದೋ ಈ ಬೀಸಣಿಗೆಯನ್ನೂ ನನ್ನ ಚಿನ್ನದ ಪಿನ್ನನ್ನೂ ಕೊಡುವೆನು" ಎಂದು ಆತನ ಕೈಗೆ ಅವುಗಳನ್ನು ತೆಗೆದುಕೊಟ್ಟಳು. ಬೀಸಣಿಗೆಯನ್ನು ತೆಗೆದುಕೊಂಡ. ಟಿಯಾನಳ ನೆನಪು ಬಂದುದರಿಂದ ಪಿನ್ನನ್ನು ಸ್ವೀಕರಿಸಲು ಭಯಪಟ್ಟ. ಮನೆಗೆ ಬಂದಮೇಲೆ ವಿಶ್ರಮಿಸುತ್ತಿದ್ದಾಗ ಈ ಪ್ರಸಂಗ ನೆನಪಿಗೆ ಬಂದು ಆತನು ವಿಚಾರಪರನಾದ. ಯೋಚಿಸುತ್ತಾ ಮನುಷ್ಯರ ಚಂಚಲ ಸ್ವಭಾವ ವನ್ನು ನೆನೆದು ನಿಟ್ಟುಸಿರು ಬಿಟ್ಟ. ಅದೇ ಸಮಯಕ್ಕೆ ಕೋಣೆಯ ಬಳಿಗೆ ಬಂದ ಟಿಯಾನಳು ಅಂದಳು, "ಇದೇನು, ಹೀಗೆ ನಿಟ್ಟುಸಿರು ಬಿಡುವಿರಿ. ಕೈಯಲ್ಲಿ ಬೀಸಣಿಗೆಯೇನು!"

ತಾನು ಹೇಳಬೇಕೆಂದು ಇದ್ದುದಕ್ಕೆ ಸರಿಯಾದ ಆಹ್ವಾನ ವಿತ್ತಂತಾಯಿತು. ನಡೆದ ಕಥೆಯನ್ನು ಹೇಳತೊಡಗಿದ. ಅದನ್ನು ಕೇಳುತ್ತಿದ್ದಂತೆ ಆಕೆ ಮುಖವನ್ನು ತಗ್ಗಿಸಿದಳು. ಸ್ತ್ರೀ ಜಾತಿಗೇ ಅವಮಾನ ತರುವಂತಹ ಆ ವಿಧವೆಯ ನಡತೆಗಾಗಿ ನಾಚಿದಳು. ತನ್ನ ಹೆಂಡತಿಯ ಮಾತುಗಳು ಮುಗಿದ ಕೂಡಲೇ ಚ್ವಾಂಗನು, "ಮುಖ ನೋಡುವುದರಿಂದಲೇ ಹೃದಯದ

ಹಾವಭಾವಗಳೆಲ್ಲವನ್ನು ತಿಳಿಯಲು ಅಸಾಧ್ಯ." [Knowing men's Faces is not like knowing their hearts.] ಎಂಬ ನಾಣ್ನುಡಿಯನ್ನು ಹೇಳಿದ.

ಆಕೆಯು ನಾಣ್ನುಡಿಯ ಅರ್ಥವನ್ನು ಗ್ರಹಿಸಿದಳು. ಅಲ್ಲದೆ ಗಂಡನ ಮಾತಿನ ಇಂಗಿತವನ್ನರಿತು ಅಂದಳು, "ಎಲ್ಲಾ ಹೆಂಗಸರೂ ಹಾಗೆಯೇ ಎಂದು ನಿಮ್ಮ ಭಾವನೆಯೇನು? ಈ ವಾದ ಸರಣಿಯಿಂದ ನೀವು ನಿಮ್ಮ ಭಾರ್ಯೆಯಲ್ಲಿಯೇ ಸಂಶಯ ಹುಟ್ಟುವಂತಹ ಮಾತುಗಳನ್ನಾಡುವುದಕ್ಕೆ ನಾಚಿಕೆಯಾಗುವುದಿಲ್ಲವೆ?" ಎಂದಳು. ಅಲ್ಲದೆ, "ಸ್ವಾಮಿನಿಷ್ಠೆಯುಳ್ಳ ಆಳು ಇಬ್ಬರು ಯಜಮಾನರಿಗೆ ದುಡಿಯಲಾರನು. ಪತಿವ್ರತೆಯಾದ ಹೆಂಗಸು ಪರಪುರುಷನ ಚಿಂತನೆಮಾಡಲಾರಳು. ನಿಮಗೇನಾದರೂ ಅಪಮೃತ್ಯು—ಬಿದ್ದು ಅನ್ನಿ—ಒದಗಿದರೆ ಆಗ ಒಂದು, ಎರಡು ಏಕೆ ನೂರೇ ವರುಷವಾದರೂ ಏರಡನೆಯ ಮದುವೆಯ ಯೋಚನೆಯನ್ನೆಂದಿಗೂ ಮಾಡಲಾರೆ ತಿಳಿಯಿತೇ." ಎಂದು ಮಾತನ್ನು ಮುಗಿಸಿದಳು.

"ಮಾತಾಡುವುದೇನು ಬಹು ಸುಲಭ" ಎಂದ ಚ್ಯಾಂಗ್ ಮಹಾಶಯ.

"ಗಂಡಸರಂತೆ ಹೆಂಗಸರು ಮಾನಗೆಟ್ಟವರೆಂದು ತಿಳಿದಿರೇನು? ನಮಗೆ ವಿವೇಚನಾಶಕ್ತಿಯೂ ವಿಮರ್ಶಕ ಬುದ್ಧಿಯೂ ಇವೆ. ನೀವುಗಳೋ ಒಬ್ಬಳು ಸತ್ತರೆ ಮತ್ತೊಬ್ಬಳ ಕೈಹಿಡಿಯುವಿರಿ. ಖುಷಿ ಬಿದ್ದರೆ ಅವಳ ಮೇಲೆ ಇಲ್ಲದ ಸಲ್ಲದ ಅಪವಾದವನ್ನು ಹೊರೆಸಿ ಮಗದೊಬ್ಬಳನ್ನು ತರಲೂ ಹೇಸುವುದಿಲ್ಲ. ಹುಚ್ಚು ಹುಚ್ಚಾಗಿ ಏಕೆ ಒದರುತ್ತೀರಿ ಸುಮ್ಮನಿರಿ" ಎಂದು, ಅವನ ಕೈಲಿದ್ದ ಬೀಸಣಿಗೆಯನ್ನು ಸೆಳೆದು ಹರಿದು ಹಾಕಿದಳು.

"ಏಕೆ ಇಷ್ಟು ರೋಷ. ಅಂತಹ ಸಂದರ್ಭ ನಿನಗೆ ಒದಗಿ ಬಂದಾಗಲ್ಲವೇ ನಿನ್ನ ವ್ಯಕ್ತಿತ್ವ ಬೆಳಗುವುದು" ಎಂದ.

ಕೆಲವು ದಿನಗಳು ಕಳೆಯುವುದರಲ್ಲಿಯೇ ಚ್ಯಾಂಗ ಮಹಾಶಯನು ಖಾಯಿಲೆ ಬಿದ್ದ. ಖಾಯಿಲೆಯು ವಿಪರೀತವೂ ಆಯಿತು. ಆಗ ಆತನು ತನ್ನ ಹೆಂಡತಿಯನ್ನು ಬಳಿಗೆ ಕರೆದು ಹೇಳಿದ, "ಅಯ್ಯೋ! ಏನು-ಮಾಡಲಿ ಸಾವು ಸಮೀಪಿಸುತ್ತಾ ಇದೆ. ಮುಂದೆ ನನ್ನ ಯೋಚನೆಯಲ್ಲಿಯೇ ನೀನು

ಕೊರಗಬೇಡ. ಆ ಬೀಸಣಿಗೆಯನ್ನು ಅಂದೇಕೆ ಹಾಳುಮಾಡಿದೆ. ಈಗ ಉಪಯೋಗಕ್ಕೆ ಬರುತ್ತಿರಲಿಲ್ಲವೆ?"

"ಇದೇನು? ಯಾಕೆ ಹೀಗೆಲ್ಲಾ ಮಾತನಾಡುತ್ತೀರಿ. ನಿಮಗೆಲ್ಲೋ ಸಂಶಯಪಿಶಾಚಿ ಹಿಡಿದಿದೆ. ನಾನು ನಿಮ್ಮ ಗುರುಗಳ "ಧರ್ಮ ಪಥ" ವೆಂಬ ಗ್ರಂಥವನ್ನೂ ವ್ಯಾಸಂಗ ಮಾಡಿದ್ದೇನೆ. ನಂಬಿಕೆ ದ್ರೋಹಿಯಾಗ ಬಾರದೆಂಬುದು ನನಗೆ ಗೊತ್ತು. ನಿಮಗೆ ಆ ವಿಚಾರದಲ್ಲಿ ಸಂಶಯವಿದ್ದರೆ ಇಗೋ ನಿಮ್ಮೆದುರಿನಲ್ಲಿಯೇ ಸಾಯಲು ಸಿದ್ಧಳಿದ್ದೇನೆ." ಎಂದಳು.

"ಎಂತಹ ಉತ್ತಮ ಹೆಂಗಸು ನೀನು" ಎನ್ನುವಾಗಲೇ ಮೇಲುಸಿರು, ಪ್ರಾರಂಭವಾಯಿತು. "ಸಾವು...........ಸಾವು...........ಕಣ್ಣು ಮಂಜಾಗು ತ್ತಿದೆ." ಎಂದವನೇ ನಿಶ್ಚೇಷ್ಟಿತನಾಗಿ ಬಿದ್ದು ಬಿಟ್ಟ.

ಟಿಯಾನಳಿಗೆ ದಿಕ್ಕು ತೋಚದಾಯಿತು. ಆತನನ್ನು ಮುಟ್ಟಿ ನೋಡಿದಳು. ದೇಹವು ತಣ್ಣಗಾಗಿದ್ದಿತು. ದುಃಖವನ್ನು ತಡೆಯಲಾರದೆ ಹೆಣದ ಮೇಲೆ ಬಿದ್ದುಬಿದ್ದು ಅಳತೊಡಗಿದಳು. ವ್ಯಸನದ ಆಧಿಕ್ಯದಿಂದ ಕೆಲವುದಿನ ಅನ್ನ ನೀರನ್ನೂ ಸಹ ತೊರೆದು ಉಪವಾಸ ಮಾಡಿದಳು. ತನ್ನ ಗಂಡನ ಗುಣವನ್ನು ಹೇಳಿ ಕೇಳುವುದರಲ್ಲಿಯೇ ಆಕೆಯ ಹೊಟ್ಟೆ ತುಂಬುವಂತೆ ಕಾಣುತ್ತಿತ್ತು. ಜ್ಞಾನಿ ಚ್ವಾಂಗನ ಮರಣವೆಂದರೆ ಸಾಧಾರಣ ವಿಚಾರವೇ? ಆ ದೇಶದ ಪದ್ಧತಿಯಂತೆ ಸುತ್ತಮುತ್ತಲಿನ ಊರಿನವರೆಲ್ಲಾ ಸತ್ತ ಮಹನೀಯನಿಗೆ ತಮ್ಮ ಗೌರವವನ್ನು ಸೂಚಿಸಲೂ ಆತನ ಹೆಂಡತಿಗೆ ಸಮಾಧಾನ ಹೇಳಲೂ ಬಂದರು. ಹೀಗೆ ಎಲ್ಲರೂ ಬಂದು ಹೋದ ಮೇಲೆ ಕಟ್ಟಕಡೆಯಲ್ಲಿ ಒಬ್ಬ ಯುವಕ ಬಾಗಿಲ ಬಳಿ ಕಾಣಿಸಿಕೊಂಡ. ಅವನು ಸುಂದರ ಪ್ರತಿಮೆಯಂತಿದ್ದ. ಅವನದು ಪ್ರತಿಭಾಸಂಪನ್ನವಾದ ಮುಖಕಮಲ; ಹವಳದ ಬಣ್ಣವನ್ನು ಮೀರಿಸಿದ್ದ ತುಟಿಗಳು. ಕಪ್ಪು ಬಣ್ಣದ ಟೊಪ್ಪಿಗೆ ಯನ್ನೂ ಮತ್ತು ನೀಲ ರೇಶ್ಮೆಯ ಬಟ್ಟೆಯನ್ನೂ ಧರಿಸಿದ್ದ. ಅವನ ಜೊತೆಯಲ್ಲಿ ಬಂದಿದ್ದ ಆಳು, ಆತನು ಸಮೀಪದಲ್ಲಿಯೇ ಇದ್ದ ಟಸೂ ನಗರದ ರಾಜಕುಮಾರನೆಂದು ತಿಳಿಸಿದ. ಆಳು ಮಾತನ್ನು ನಿಲ್ಲಿಸಿದ ಮೇಲೆ ರಾಜಕುಮಾರನೇ ಹೀಗೆ ಹೇಳಿದ.

"ಕೆಲವು ದಿವಸಗಳ ಹಿಂದೆ ನನ್ನನ್ನು ತಮ್ಮ ಶಿಷ್ಯನನ್ನಾಗಿ ತೆಗೆದು ಕೊಳ್ಳಬೇಕೆಂದು ಚ್ವಾಂಗ್ ಗುರುಗಳಿಗೆ ಪತ್ರ ಬರೆದಿದ್ದೆ. ಅವರು ಅದಕ್ಕೆ ಸದುತ್ತರವಿತ್ತಮೇಲೆಯೇ ನಾನು ಇತ್ತ ಬಂದೆ. ನನ್ನ ದುರದೃಷ್ಟವೇನೆಂದು ಹೇಳಲಿ? ನಾನು ಅವರ ಸಾವನ್ನು ನೋಡಲು ಬರಬೇಕಾಯಿತಲ್ಲಾ"

ರಾಜಕುಮಾರನು ಮನೆಯ ಒಳಗೆ ಪ್ರವೇಶಿಸಿ, ತನ್ನ ಉತ್ತಮ ಉಡುಪನ್ನು ಬಿಚ್ಚಿ ದುಃಖ ಸೂಚಕವಾದ ಕಪ್ಪುಬಟ್ಟೆಯನ್ನು ಉಟ್ಟು, ಗುರುವಿನ ದೇಹವನ್ನು ಇಟ್ಟಿದ್ದ ಪೆಟ್ಟಿಗೆಯ ಮುಂದೆ ಬಂದು ನಾಲ್ಕು ಸಲ ಸಾಷ್ಟಾಂಗ ನಮಸ್ಕಾರಮಾಡಿ ಆತನ ಪಾಂಡಿತ್ಯವನ್ನು ನೆನೆದು ಕಣ್ಣೀರು ಕರೆದನು.

" ಓ, ಗುರುದೇವನೇ, ನಿನ್ನಿಂದ ವಿದ್ಯೆಯನ್ನು ಕಲಿಯಲು ಬಂದುದು ವ್ಯರ್ಥವಾಯಿತು. ಆದರೆ ನಿನಗೆ ನನ್ನ ಗೌರವವನ್ನು ಸೂಚಿಸುವುದ ಕ್ಕಾಗಿಯಾದರೂ ಇಲ್ಲಿ ನೂರು ದಿನಗಳ ಕಾಲ ತಂಗುವೆನು. ದಯವಿಟ್ಟು ನನ್ನ ಪ್ರಣಾಮಗಳನ್ನು ಸ್ವೀಕರಿಸು." ಎಂದು ಹೇಳಿ ಮತ್ತೆ ಆ ಪೆಟ್ಟಿಗೆಗೆ ನಮಸ್ಕಾರಗಳನ್ನು ಮಾಡಿದನು. ಸ್ವಲ್ಪ ಸಮಾಧಾನವನ್ನು ಹೊಂದಿದ ಮೇಲೆ, ಗುರುಪತ್ನಿಯನ್ನು ನೋಡಲು ಅಪ್ಪಣೆ ಬೇಡಿದನು. ನಾಲ್ಕಾರು ಬಾರಿ ಕೇಳಿಕೊಂಡರೂ, ಆಕೆಯು ಅದಕ್ಕೆ ಸಮ್ಮತಿಸಲಿಲ್ಲ. ತನ್ನ ಪತಿಯ ಶಿಷ್ಯರಿಗೆ ಹಾಗೆ ಇಲ್ಲವೆನ್ನಬಾರದು ಎಂದು ಕೆಲವು ಹಿರಿಯರು ಬುದ್ಧಿವಾದ ಹೇಳಿದ ಮೇಲೆ ನೋಡಲು ಅನುಮತಿಯಿತ್ತಳು.

ಆ ಮೇಲೆ ರಾಜಕುಮಾರನು ಗುರುಪತ್ನಿಯೊಂದಿಗೆ ಮಾತನಾಡಲು ಆಕೆಯ ಕೋಣೆಯನ್ನು ಪ್ರವೇಶಿಸಿದ. ಒಮ್ಮೆ ಯಾರೆಂದು ನೋಡುವ ಕುತೂಹಲದಿಂದ ಆತನೆಡೆಗೆ ದೃಷ್ಟಿಯನ್ನು ಬೀರಿದಳು. ಅಂತಹ ಸಂದರ್ಭ ದಲ್ಲಿಯೂ ಕೂಡ ಆತನ ಅತೀಯ ಸೌಂದರ್ಯವು ಇವಳ ಮನ ಸೆಳೆಯಿತು. ಆತನನ್ನು ಅಂದು ಆ ಮನೆಯಲ್ಲಿಯೇ ಉಳಿಯಬೇಕೆಂದು ಕೇಳಿಕೊಂಡಳು. ಇಬ್ಬರೂ ಚ್ವಾಂಗ್ ಮಹಾಶಯನ ವಿಚಾರವಾದ ಮಾತನ್ನಾಡುತ್ತಾ ಕೆಲವು ಕಾಲ ಕಳೆದರು. ಊಟವಾದ ಮೇಲೆ ಟಿಯಾನಳು, ತನ್ನ ಗಂಡನ ಅಮೂಲ್ಯವಾದ "ನಾನ್‌ಹಾನ ಸಾಹಿತ್ಯ" ಮತ್ತು "ಸಾತ್ವಿಕ ಗುಣ ಮತ್ತೂ ನಡತೆಯ ಸೂತ್ರಗಳು" ಎಂಬ ಎರಡು ಗ್ರಂಥಗಳನ್ನು ರಾಜ

ಕುಮಾರನಿಗೆ ದಾನಮಾಡಿದಳು. ಪ್ರತಿದಿನವೂ ಅವರಿಬ್ಬರೂ ಚ್ಯಾಂಗ್ ಮಹಾಶಯನ ಆತ್ಮಕ್ಕೆ ಶಾಂತಿಯನ್ನು ಕೋರಲು ಅವನ ಪಾರ್ಥಿವ ಶರೀರವನ್ನೊಳಗೊಂಡ ಪೆಟ್ಟಿಗೆಯ ಮುಂದೆ ನಿಂತು ದೇವರಲ್ಲಿ ಪ್ರಾರ್ಥಿಸುತ್ತಿದ್ದರು. ರಾಜಕುಮಾರನಿಗೂ ಆಕೆಗೂ ದೊರೆತ ಈ ಮಾತನಾಡುವ ಅವಕಾಶದಿಂದ ಅವರಿಬ್ಬರಲ್ಲಿಯೂ ಅನುರಾಗವು ಬೆಳೆಯ ತೊಡಗಿತು. ನೋಡಿದವರಿಗೆ ರಾಜಕುಮಾರನು ಅರ್ಧ ಆಕೆಯಲ್ಲಿ ವ್ಯಾಮೋಹಗೊಂಡಿದ್ದಾನೆಂದು ತಿಳಿಯುತಿತ್ತು. ಅವಳಾದರೋ ಆತನನ್ನು ದಕ್ಕಿಸಿಕೊಳ್ಳಲು ಹಂಬಲಿಸುತ್ತಿದ್ದಳು. ರಾಜಕುಮಾರನ ವಿಚಾರವಾಗಿ ಇನ್ನೂ ಹೆಚ್ಚು ವಿಷಯವನ್ನು ತಿಳಿಯಲು ಆತನ ಜವಾನನಿಗೆ ಲಂಚಕೊಟ್ಟಳು. ರಾಜಕುಮಾರನ ಮದುವೆಯ ಪ್ರಸ್ತಾಪವನ್ನೂ ಎತ್ತಿದಳು.

"ಅವರಿಗೆ ಇನ್ನೂ ಮದುವೆಯಾಗಿಲ್ಲ" ಎಂದು ಅವನೆಂದ.

"ಹಾಗೇನು? ಅಂದಮೇಲೆ ಅವರು ಎಂತಹಹೆಂಗಸನ್ನು ಮದುವೆಯಾಗಲು ಅಪೇಕ್ಷಿಸುವರು?"

ಜವಾನನು ಸಾಕಷ್ಟು ಕುಡಿದಿದ್ದ. ವಿವೇಚನೆಯಿಲ್ಲದೆ ಮಾತನಾಡ ತೊಡಗಿದ. "ಅವರು ಹೇಳುತ್ತಾರೆ, ನಿಮ್ಮಂತಹ ಸೌಂದರ್ಯವತಿಯನ್ನು ಹೊಂದಿದರೆ ಧನ್ಯನಾದೆನೆಂದು."

ಈಕೆ ಕಾತರತೆಯಿಂದ ಕೇಳಿದಳು, "ನಿಜವಾಗಿ ಅವರು ಹಾಗೆ ಹೇಳಿದರೇನು? ನೀನು ಹೇಳುವ ಮಾತೆಲ್ಲವೂ ಸತ್ಯತಾನೆ?" ಮತ್ತೆ ದೈನ್ಯತೆಯಿಂದ ಅವನನ್ನು ಕೇಳಿಕೊಂಡಳು, "ನೋಡು, ಈಗ ನಿನ್ನ ಸಹಾಯ ತುಂಬಾ ಅವಶ್ಯಕ. ನಮ್ಮಿಬ್ಬರನ್ನೂ ದಂಪತಿಗಳಾಗುವಂತೆ ಮಾಡುವ ಭಾರ ನಿನ್ನ ಮೇಲೆ ಬಿದ್ದಿದೆ."

"ನೋಡಿ, ಇದೇ ವಿಷಯದಲ್ಲಿ ರಾಜಕುಮಾರರೂ ಸಹ ಮಾತನಾಡಿದರು. ಅವರಿಗೂ ತುಂಬಾ ಆಸೆಯಿದೆ. ಆದರೆ ಗುರುಪತ್ನಿಯನ್ನು ಸ್ವೀಕರಿಸಲು ಹಿಂದೆಗೆಯುತ್ತಾರೆ. ಅಲ್ಲದೆ ಈ ವಿಷಯವು ಸಮಾಜದಲ್ಲಿ ಅಲ್ಲಕಲ್ಲೋಲವನ್ನುಂಟು ಮಾಡುವುದೆಂದು ಅವರ ಭಯ."

"ಅದಕ್ಕೇನೂ ಭಯಪಡಬೇಕಾದುದಿಲ್ಲ. ರಾಜಕುಮಾರರು ಇನ್ನೂ ನನ್ನ ಯಜಮಾನರ ಶಿಷ್ಯರಾಗಿರಲಿಲ್ಲ. ಇಲ್ಲಿರುವ ಸುತ್ತುಮುತ್ತಲಿನ ಜನರಿಗೆ

ಭಯಪಡಬೇಕಾದುದೇನೂ ಇಲ್ಲ. ನಮ್ಮ ವಿಚಾರದಲ್ಲಿ ಅಷ್ಟು ಆಸಕ್ತಿ ವಹಿಸಿ ಪ್ರಶ್ನಿಸಲು ಬರುವವರು ಯಾರೂ ಇಲ್ಲ."

ಈ ಮಾತುಗಳೆಲ್ಲವನ್ನೂ ವಿಸ್ತಾರವಾಗಿ ತನ್ನ ಯಜಮಾನನಾದ ರಾಜಕುಮಾರನಿಗೆ ತಿಳುಹಿಸಿ ಆತನು ಅದಕ್ಕೆ ಕೊಡುವ ಉತ್ತರವನ್ನು ಎಷ್ಟೇ ಹೊತ್ತಾದರೂ ಅಂದೇ ತರುವುದಾಗಿ ಹೇಳಿ ಆಳು ಹೊರಟು ಹೋದನು.

ಆಕೆಯ ಮನಸ್ಸು ಉದ್ವೇಗಗೊಂಡಿತ್ತು. ಆತನ ಉತ್ತರದ ನಿರೀಕ್ಷಣೆಯಲ್ಲಿ ತವಕಪಡುತಿದ್ದಳು. ತನ್ನ ಯಜಮಾನರ ಶವವನ್ನೊಳಗೊಂಡ ಪೆಟ್ಟಿಗೆ ಇರಿಸಿದ್ದ ಕೊಠಡಿಯಲ್ಲಿ ಅತ್ತಲಿಂದಿತ್ತು ತಿರುಗಾಡತೊಡಗಿದಳು. ಕಾರಣ—ರಾಜಕುಮಾರನು ಇಳಿದುಕೊಂಡಿದ್ದ ಕೋಣೆಯು ಪಕ್ಕದ್ದೇ ಆಗಿದ್ದುದರಿಂದ ಅವನಿಗೂ ಜವಾನನಿಗೂ ಆಗುವ ಸಂಭಾಷಣೆಯನ್ನು ಕೇಳುವ ಆಸೆಯಿಂದ ಇರಬಹುದು. ನಿಶ್ಶಬ್ದತೆಯು ಎಲ್ಲೆಡೆಯೂ ಆವರಿಸಿತ್ತು. ಈ ಮಧ್ಯೆ ಆ ಪೆಟ್ಟಿಗೆಯೊಳಗಿಂದ ಉಸಿರಾಡುವ ಶಬ್ದ ಕೇಳಿಸಿದಂತಾಯಿತು. ಆಕೆಗೆ ಬಹು ಘಾಬರಿಯಾಯಿತು. "ಸತ್ತ ಮನುಷ್ಯನಿಗೆ ಮತ್ತೆ ಜೀವ ಬರುವುದಾದರೂ ಉಂಟೆ?" ಎಂದು ಭಯಪಟ್ಟಳು.

ದೀಪವನ್ನು ಹಚ್ಚಿನೋಡಲು ನಿಜಸ್ಥಿತಿಯ ಅರಿವಾಗಿ ಮನಸ್ಸಿಗೆ ನೆಮ್ಮದಿಯಾಯಿತು. ಕುಡಿದು ಅಮಲೇರಿದ್ದ ಆ ಜವಾನನು ಪೆಟ್ಟಿಗೆಯ ಕಡೆ ಕಾಲುಮಾಡಿ ಬಿದ್ದಿದ್ದ. ಬೇರೆಯಾವ ಕಾಲದಲ್ಲಿಯೇ ಆಗಲಿ ಅವನ ಈ ನಡತೆಗೆ ಗದರಿಸಿ ಶಿಕ್ಷಿಸದೇ ಬಿಡುತ್ತಿರಲಿಲ್ಲ. ಮರುದಿನ ಬೆಳಗ್ಗೆ ಸಹ ಅವನೊಂದಿಗೆ ಈ ಸುದ್ದಿಯನ್ನೇ ಎತ್ತಲಿಲ್ಲ, ಅದಕ್ಕೆ ಬದಲಾಗಿ ನೆನ್ನೆ ತಾನು ಕೇಳಿದ್ದ ಪ್ರಶ್ನೆಗಳಿಗೆ ರಾಜಕುಮಾರನು ಏನು ಉತ್ತರವಿತ್ತನೆಂದು ಕೇಳಿದಳು. ರಾಜಕುಮಾರನಿಂದ ಆಶಾದಾಯಕವಾದ ಉತ್ತರವು ಬಂದಿದೆಯೆಂದೂ ಆದರೆ ಇನ್ನೂ ಕೆಲವು ಕಾರಣಗಳು ಆತನು ಹಿಂಜರಿಯುವಂತೆ ಮಾಡುತ್ತಿವೆಯೆಂದೂ ಹೇಳಿದನು.

"ಅವು ಯಾವುವು? ನಿನ್ನೊಡನೆ ಹೇಳಿದ್ದಾರೆಯೆ?" ಎಂದಳು ಆಕೆ.

"ಅದೇ? ಕೇವಲ ಮೂರೇ ಮೂರು ಕಾರಣಗಳು. ಮೊದಲನೆಯದು :—ಮದುವೆಯಂತಹ ಮಂಗಳಕಾರ್ಯವು ನಡೆಯುವಾಗ ಶವದ

ಪೆಟ್ಟಿಗೆ ಮನೆಯಲ್ಲಿಯೇ ಇರುವುದು. ಎರಡನೆಯದು: ಚ್ವಾಂಗ್ ಮಹಾಶಯನು ಮೇಧಾವಿ, ಪ್ರತಿಭಾ ಸಂಪನ್ನ. ತನ್ನ ಹೆಂಡತಿಯಾದ ಆಕೆಯನ್ನು ಪ್ರೀತಿಸುತ್ತಲೂ ಇದ್ದು ಅದಕ್ಕೆ ಪ್ರತಿಯಾಗಿ ಆಕೆಯು ಅವನನ್ನು ಪ್ರೀತಿಸುತ್ತಲೂ ಇರಬಹುದು. ಆದ್ದರಿಂದ ಅವನ ಸ್ಥಳದಲ್ಲಿ ತಾನು ನಿಲ್ಲಲು ತಕ್ಕ ಯೋಗ್ಯತೆಯಿಲ್ಲದಿರುವುದು. ಕೊನೆಯದಾಗಿ ಮದುವೆಯ ಸಂಭ್ರಮಕ್ಕೆ ಬೇಕಾದಷ್ಟು ಹಣವನ್ನೇ ಆಗಲಿ ಬಟ್ಟೆಗಳನ್ನೇ ಆಗಲಿ ತರದಿರುವುದು." ಎಂದನು.

"ಹೋ, ಇಷ್ಟೇನೆ. ಅವರಿಗೆ ಹೇಳು ಇವು ಯಾವುದಕ್ಕೂ ಯೋಚಿಸಬೇಡವೆಂದು. ಶವದ ಪೆಟ್ಟಿಗೆಯನ್ನು ಇಲ್ಲಿಂದ ಸಾಗಿಸಲು ಈಗಲೇ ಏರ್ಪಾಡು ಮಾಡುತ್ತೇನೆ. ಎರಡನೆಯ ಕಾರಣಕ್ಕೂ ಅವರೇನೂ ಸಂಕೋಚ ಪಡಬೇಕಾದುದಿಲ್ಲ. ವಿಚಾರ ಹೀಗೆ:—ನನ್ನ ಮೊದಲ ಯಜಮಾನರು ಪ್ರತಿಭಾವಂತರೂ, ವಿದ್ಯಾವಂತರೂ ಎಂಬುದೇನೋ ಸತ್ಯ. ಆದರೆ ಅವರ ಗುಣವು ಅಷ್ಟರಲ್ಲಿಯೇ ಇತ್ತು. ಮೊದಲನೆಯ ಹೆಂಡತಿಯು ಇವರ ಕಾಟವನ್ನು ತಾಳಲಾರದೆ ಸತ್ತು ಹೋದಳು. ಎರಡನೆಯವಳ ಮೇಲೆ ಇವರೇ ಇಲ್ಲದ ಅಪವಾದವನ್ನು ಒಡ್ಡಿ ಓಡಿಸಿಬಿಟ್ಟರು. ನನ್ನ ಮದುವೆಯಾದ ಮೇಲೂ ಸಹ ಅವರ ನಡತೆ ಹದಕ್ಕೆ ಬಂದಿರಲಿಲ್ಲ. ಒಮ್ಮೆ ವಿಹಾರಕ್ಕಾಗಿ ಹೋಗಿದ್ದಾಗ ಸ್ಮಶಾನದಲ್ಲಿ ಒಬ್ಬ ವಿಧವೆಯೊಡನೆ ಅಂಗಸಂಗ ನಡೆಸಿದ್ದರು. ಆದ್ದರಿಂದ ನನಗೆ ಅವರಲ್ಲಿದ್ದ ಅಭಿಮಾನವೂ ಅಷ್ಟರಲ್ಲೇ ಇತ್ತು. ನಿಮ್ಮ ರಾಜಕುಮಾರನನ್ನು ನಾನಾಗಿಯೇ ವರಿಸಿದ್ದೇನೆ. ಅನುಮಾನವೇಕೆ? ಹಣಕ್ಕಾಗಿಯೂ ವ್ಯಥೆಪಡಬೇಕಾಗಿಲ್ಲ. ನನ್ನಲ್ಲಿ ಬೇಕಾದಷ್ಟು ಹಣ ಇದೆ. ಆದ್ದರಿಂದ ನೀನು ಬೇಗ ಹೋಗಿ ಆತನು ತ್ವರೆ ಮಾಡುವಂತೆ ಹೇಳು. ಇಂದು ಸಾಯಂಕಾಲ ಒಳ್ಳೆಯ ಮುಹೂರ್ತವಿದೆ ನಡೆದೇ ಹೋಗಲಿ" ಎಂದಳು.

ಜವಾನನು ಹಣವನ್ನು ಆಕೆಯಿಂದ ಪಡೆದು ರಾಜಕುಮಾರನ ಬಳಿಗೆ ಹೋದನು. ಸ್ವಲ್ಪಕಾಲದಲ್ಲಿಯೇ, ಹಿಂದಕ್ಕೆ ಬಂದು, ರಾಜಕುಮಾರನು ತನ್ನ ಎಲ್ಲಾ ಅನುಮಾನಗಳನ್ನೂ ಆಕೆಯ ಉತ್ತರದಿಂದ ಬಗೆಹರಿಸಿಕೊಂಡಿರುವ

ನೆಂದೂ, ಅಂದೇ ಮುಹೂರ್ತವನ್ನು ಇಡುವುದಕ್ಕೆ ತನ್ನ ಅಭ್ಯಂತರ ವೇನೂ ಇಲ್ಲವೆಂದು ಹೇಳಿಕಳುಹಿಸಿರುವುದಾಗಿಯೂ ಹೇಳಿದನು. ”

ಈ ಸಂತೋಷದ ಸುದ್ದಿಯನ್ನು ಕೇಳಿ ಆಕೆಯ ಮುಖವು ಪ್ರಫುಲ್ಲಿತ ವಾಯಿತು, ಕೆನ್ನೆಗಳು ಕೆಂಪಾದವು. ಹೊಸ ಉಡಿಗೆಯನ್ನು ಉಟ್ಟು ಆಭರಣ ದಿಂದ ಸಿಂಗರಿಸಿಕೊಂಡಳು. ಮನೆಯ ಆಳನ್ನೂ ಕರೆದು ಶವದ ಪೆಟ್ಟಿಗೆಯನ್ನು ಮನೆಯ ಹಿಂದಿದ್ದ ಕೊಟ್ಟಿಗೆಗೆ ಸಾಗಿಸಲು ಅಪ್ಪಣೆಯಿತ್ತಳು. ಪುರೋಹಿತರಿಗೆ ಹೇಳಿ ಕಳುಹಿದಳು. ತಾನೇ ಮನೆಯೆಲ್ಲವನ್ನೂ ಅಲಂಕರಿಸಿ ದೀವಿಗೆಗಳನ್ನು ಹೊತ್ತಿಸಿದಳು. ಮುಹೂರ್ತದ ಗಳಿಗೆಯ ಹೊತ್ತಿಗೆ ಬೇಕಾದುದೆಲ್ಲವನ್ನೂ ಅಣಿಮಾಡಿ ರಾಜಕುಮಾರನ ಬರುವಿಗಾಗಿ ದಾರಿಕಾಯುತ್ತಾ ನಿಂತಳು. ರಾಜ ಕುಮಾರನೂ ಹೊತ್ತಿಗೆ ಸರಿಯಾಗಿ ತನ್ನ ಜವಾನನ ಒಡಗೂಡಿ ಬಂದ. ರಾಜಕುಮಾರನಿಗೆ ತಕ್ಕುದಾದ ಉಡುಪನ್ನೇ ಧರಿಸಿದ್ದ. ಇಬ್ಬರೂ ಜತೆ ಗೂಡಿ ದೀವಿಗೆಯ ಬೆಳಗಿನಲ್ಲಿ ನಿಂತಾಗ ಅವರ ಸೌಂದರ್ಯವು ನಯವಾದ ಚಿನ್ನದ ಕಟ್ಟಿನ ನಡುವೆ ಇರುವ ರತ್ನದ ಪ್ರಭೆಯಂತಿತ್ತು. ಶಾಸ್ತ್ರಕ್ರಿಯೆ ಗಳೆಲ್ಲವೂ ನಡೆದ ಮೇಲೆ ರಾಜಕುಮಾರನು ತನ್ನ ರಮಣಿಯನ್ನು ಕರೆದು ಕೊಂಡು ಮಲಗುವ ಕೋಣೆಗೆ ಹೊರಟನು. ಇನ್ನೇನು ಪಲ್ಲಂಗದಲ್ಲಿ ಮಲ ಗಲು ಅಣಿಯಾಗುವ ಹೊತ್ತಿಗೆ ಸರಿಯಾಗಿ ರಾಜಕುಮಾರನಿಗೆ ಅಸಾಧ್ಯ ವಾದ ಸೆಳೆತ ಪ್ರಾರಂಭವಾಗಿ ಬರುಬರುತ್ತಾ ಅದು ಭಯಂಕರವಾಗುತ್ತಾ ಬಂತು. ಆತನ ಮುಖ ವಿಕಾರಹೊಂದಿತು. ಹುಬ್ಬು ಅದುರಲಾರಂಭಿಸಿತು. ಕಿಟ್ಟನೆ ಕಿರುಚುತ್ತಾ ನೆಲದ ಮೇಲೆ ಬಿದ್ದುಬಿಟ್ಟ.

ಟಿಯಾನಳು ವಿಷಣ್ಣವದನಳಾದಳು. ಅವಳಿಗೆ ದುಃಖವಾವರಿಸಿತು. ಸಮಾಧಾನ ಮಾಡಿಕೊಂಡು ರೋಗಿಗೆ ಉಪಚಾರ ಮಾಡತೊಡಗಿದಳು. ಮುಖಕ್ಕೆ ತಣ್ಣೀರೆರಚಿ ಆತನಿಗೆ ಪ್ರಜ್ಞೆ ಬರುವಂತೆ ಏನೇನೋ ಪ್ರಯತ್ನ ವನ್ನು ಮಾಡಿನೋಡಿದಳು. ಆದರೂ ಸಾಧ್ಯವಾಗಲಿಲ್ಲ.

ಆಳನ್ನು ಕರೆಸಿ ಕೇಳಿದಳು, “ ಇವರಿಗೆ ಹೀಗೆ ಯಾವಾಗಲಾದರೂ ಆಗುತ್ತಿತ್ತೆ, ಇಲ್ಲವೆ ಇದೇ ಮೊದಲ ಸಾರಿಯೋ ? ”

"ಎಷ್ಟೊ ಬಾರಿ ಅವರಿಗೆ ಹೀಗೆಯೇ ಆಗುತ್ತಿತ್ತು ತಾಯಿ. ಈ ಪ್ರಪಂಚದಲ್ಲಿ ಆ ರೋಗವನ್ನು ವಾಸಿಮಾಡಲು ಯಾವ ಔಷಧಿಯೂ ಇಲ್ಲ. ಆದರೆ ಒಂದು ಔಷಧಿ ಇದೆ. ಅದು ಗುಣ ಉಂಟುಮಾಡಬಹುದು."

"ಅದು ಯಾವುದು?" ಎಂದು ಆತುರವಾಗಿ ಕೇಳಿದಳು.

"ಮದ್ಯಸಾರದಲ್ಲಿ ಬೇಯಿಸಿದ ಮಿದುಳನ್ನು ತಿನ್ನಿಸಿದರೆ ಮತ್ತೆ ಗುಣ ಹೊಂದುತ್ತಾನೆ ನೋಡಿ. ಹಿಂದೆ ಟಾಜೋವಿನಲ್ಲಿದ್ದಾಗ ರಾಜಕುಮಾರರಿಗೆ ಎಷ್ಟೋ ವೇಳೆ ಹೀಗೆ ಸೆಳೆತ ಬರುತ್ತಿದ್ದಿತು. ದೊಡ್ಡ ಮಹಾರಾಜರು ಒಬ್ಬ ಮನುಷ್ಯನನ್ನು ಕೊಲೆ ಮಾಡಿಸಿ ಅವನ ಮಿದುಳಿನಿಂದ ಔಷಧಿಯನ್ನು ತಯಾರಿಸಿ ಕುಡಿಸಿದ್ದರು. ಆದರೆ ಹಾಗೆ ಮಾಡಲು ಇಲ್ಲಿ ಎಲ್ಲಿ ಸಾಧ್ಯ?"

"ಸತ್ತ ಮನುಷ್ಯನ ಮಿದುಳಿನಿಂದ ಅದನ್ನು ತಯಾರಿಸಲು ಸಾಧ್ಯವೆ?"

"ಸಾಧ್ಯವಿದೆ. ಆದರೆ ಸತ್ತು ನಾಲ್ವತ್ತೊಂಬತ್ತು ದಿನಗಳು ಮೀರಿರ ಬಾರದು."

"ಹಾಗಾದರೆ ಸರಿ. ನನ್ನ ಮೊದಲ ಯಜಮಾನರು ಸತ್ತು ಇಪ್ಪತ್ತು ದಿನಗಳೂ ಸಹ ಕಳೆದಿಲ್ಲ. ಆದ್ದರಿಂದ ಆತನ ಮಿದುಳನ್ನು ಉಪಯೋಗಿಸ ಬಹುದು."

"ಏನು ಅದನ್ನು ಉಪಯೋಗಿಸಲು ನೀವು ಒಪ್ಪುವಿರೇನು?"

ಅದಕ್ಕೆ ಆಕೆಯೆಂದಳು, "ನೋಡು ಏನೇ ಆಗಲಿ ಈಗ ರಾಜಕುಮಾ ರನೂ ನಾನೂ ಗಂಡಹೆಂಡಿರು. ಹೆಂಡತಿಯಾದವಳು ಗಂಡನಿಗೆ ಸರ್ವ ವನ್ನೂ ಅರ್ಪಿಸಲು ಸಿದ್ಧಳಿರಬೇಕು. ಅಂದಮೇಲೆ ನಾನು ಹಾಗೆ ಮಾಡು ವಲ್ಲಿ ತಪ್ಪೇನು? ಕೆಲವು ದಿನಗಳಲ್ಲಿಯೇ ಮಣ್ಣಾಗುವ ಆ ಶವಕ್ಕಾಗಿ ಚಿಂತಿಸಲೇಕೆ?".

ತಲೆಬುರುಡೆಯನ್ನು ಒಡೆಯಲು ಒಂದು ಕೊಡಲಿಯನ್ನು ಹಿಡಿದು ಶವವಿದ್ದ ಸ್ಥಳಕ್ಕೆ ಬಂದಳು. ದೀಪವನ್ನು ಸರಿಯಾದೆಡೆಯಲ್ಲಿ ಇಟ್ಟು ತನ್ನ ಬಟ್ಟೆಯನ್ನು ಮೇಲಕ್ಕೆ ಎತ್ತಿಕಟ್ಟಿ, ಕೊಡಲಿಯನ್ನು ಎರಡು ಕೈಗ ಳಿಂದಲೂ ಹಿಡಿದು ಪೆಟ್ಟಿಗೆಯನ್ನು ಒಡೆಯತೊಡಗಿದಳು. ಮೂವತ್ತು ನಲವತ್ತು ಪೆಟ್ಟು ಬಿದ್ದ ಮೇಲೆಯೇ ಆ ಪೆಟ್ಟಿಗೆಯನ್ನು ತೆಗೆಯಲು ಸಾಧ್ಯ

ವಾದದ್ದು. ಇನ್ನು ಮುಂದಿನ ಕ್ರೂರ ಕಾರ್ಯದಲ್ಲಿ ತೊಡಗುವ ಮೊದಲು ಶವದ ಕಡೆಗೊಮ್ಮೆ ನೋಡಿದಳು. ಆಗ ಅವಳಿಗುಂಟಾದ ಘಾಬರಿಯನ್ನೇನೆಂದು ಹೇಳೋಣ. ಚ್ವಾಂಗ್ ಮಹಾಶಯನ ಶವ ಜೀವಂತವಾಯಿತು. ಎರಡು ಸಲ ಬಿಸಿಯುಸಿರು ಬಿಟ್ಟು ಕಣ್ಣು ತೆರೆದನು; ಎದ್ದು ಕುಳಿತನು. ಟಿಯಾನಳು ಕಿಟ್ಟನೆ ಚೀರಿ ಹಿಂದಕ್ಕೆ ಬಿದ್ದುಬಿಟ್ಟಳು. ಆಕೆಯ ನಿಶ್ಶಕ್ತ ಕೈಗಳಿಂದ ಕೊಡಲಿಯು ಬಿದ್ದುಹೋಯಿತು.

" ಪ್ರಿಯೇ ಏಳು. ನಾನು ಮೇಲೇಳಲು ಸಹಾಯಮಾಡು." ಎಂದನು ಚ್ವಾಂಗ್ ಮಹಾಶಯ.

ಆಕೆ ಏನು ಮಾಡಲೂ ತೋರದೆ ಆತನು ಹೇಳಿದಂತೆ ಕೇಳಿದಳು. ಆಕೆಯ ಸಹಾಯದಿಂದ ಸಲೀಸಾಗಿ ಎದ್ದು ಮಲಗುವಕೋಣೆಯ ಕಡೆಗೆ ನಡೆದ. ಅಲ್ಲಿ ಅವನು ಕಾಣಬಹುದಾದ ತನ್ನ ಕೃತ್ಯವನ್ನು ನೆನೆಸಿಕೊಂಡು ನಡುಗಿಹೋದಳು. ಮನೆಯ ಆ ಭಾಗವನ್ನು ಹೊಕ್ಕಾಗ ರಾಜಕುಮಾರನೂ, ಜವಾನನೂ ಇಲ್ಲದಿರುವುದನ್ನು ಕಂಡ ಮೇಲೆ ಸ್ವಲ್ಪ ಸಮಾಧಾನವಾಯಿತು. ಅದರ ಸದುಪಯೋಗಪಡಿಸಿಕೊಂಡು ಹೇಳತೊಡಗಿದಳು "ನಿಮ್ಮ ಸಾವಾದಾಗಿನಿಂದಲೂ ಹಗಲಿರುಳೂ ನಿಮ್ಮ ಹಂಬಲಿನಲ್ಲಿಯೇ ಇದ್ದೆ. ಕೆಲವು ನಿಮಿಷಗಳ ಕೆಳಗೆ ಶವವನ್ನು ಹಾಕಿದ್ದ ಪೆಟ್ಟಿಗೆಯಿಂದ ಉಸಿರಾಡುವ ಶಬ್ದ ಕೇಳಿ ಬಂತು. ನೀವು ಮತ್ತೆ ಜೀವಂತರಾದಿರೆಂಬ ಆಸೆ ಉತ್ಪನ್ನವಾಯಿತು. ಅಲ್ಲದೆ ಹಿಂದಿನ ಕತೆಗಳಲ್ಲಿ ಕೇಳಿದ್ದೆ ಜೀವ ಹೀಗೆ ಮತ್ತೆ ಬರುವುದೂ ಉಂಟೆಂದು. ಆದ್ದರಿಂದಲೇ ಕೊಡಲಿಯಿಂದ ಪೆಟ್ಟಿಗೆಯನ್ನು ಒಡೆದೆ. ದೇವರು ಎಷ್ಟು ಒಳ್ಳೆಯವನು. ನನ್ನ ದೇವರನ್ನು ನನಗೆ ದಯಪಾಲಿಸಿದ" ಎಂದು ಚ್ವಾಂಗನನ್ನು ತಬ್ಬಿಕೊಂಡಳು.

" ಟಿಯಾನಾ ನನಗೂ ತುಂಬಾ ಸಂತೋಷ. ಆದರೆ ಇದೇನು ನೀನು ಇಷ್ಟು ಬೇಗನೆ ಹಬ್ಬದ ಉಡುಗೆಯನ್ನು ಧರಿಸಿದ್ದೀಯಲ್ಲ"

"ನಾನು ಮೊದಲೇ ಹೇಳಲಿಲ್ಲವೆ? ನೀವು ಬದುಕುವುದು ಖಂಡಿತವೆಂಬ ನಂಬುಗೆಯಿತ್ತು. ಅಂತಹ ಸ್ಥಿತಿಯಲ್ಲಿ ಇನ್ನೂ ದುಃಖಸೂಚಕ ಬಟ್ಟೆಯನ್ನೇ

ಉಟ್ಟಿರುವುದು ಸರಿಯಲ್ಲವೆಂದರಿತು ಉತ್ತಮ ಉಡಿಗೆ ಉಟ್ಟೆ ಅಷ್ಟೆ" ಎಂದಳು.

"ಸರಿ ಸರಿ. ಈಗ ಅರ್ಥವಾಯಿತು. ನನ್ನ ಶವದ ಪೆಟ್ಟಿಗೆಯನ್ನು ಹಿತ್ತಲಲ್ಲಿ ಹಾಕಿದ್ದ ಉದ್ದೇಶವಾದರೂ ಏನು?"

ಈ ಪ್ರಶ್ನೆಗೆ ಸಮರ್ಪಕವಾದ ಉತ್ತರವೀಯಲು ಆಕೆಯ ಬುದ್ಧಿಗೆ ಹೊಳೆಯಲಿಲ್ಲ. ಚ್ವಾಂಗನು ಮದುವೆಯ ಸಂಭ್ರಮಕ್ಕಾಗಿ ತಯಾರಿಸಿದ ತಿಂಡಿತೀರ್ಥಗಳನ್ನು ನೋಡಿದ. ಆದರೆ ಯಾವ ಮಾತನ್ನೂ ಆಡಲಿಲ್ಲ. ಅದಕ್ಕೆ ಬದಲು ಕೆಲವನ್ನು ಆಕೆಯ ಕೈಯಿಂದಲೇ ತರಿಸಿ ತಿಂದ. ಆಕೆಯು ಆತನು ಕೇಳುತ್ತಿದ್ದುದನ್ನೆಲ್ಲಾ ಸಂತೋಷದಿಂದ ತಂದು ಅವನ ಮನಮೆಚ್ಚು ವಂತೆ, ಆತನಿಗೆ ಹರ್ಷವುಕ್ಕಿ ನಗೆ ಸೂಸುವಂತೆ ಮಾಡಲು ಪ್ರಯತ್ನಿಸು ತ್ತಿದ್ದಳು. ಅವನು ಅದಕ್ಕೆ ಆಸ್ಪದಕೊಡದೆ ಗಂಭೀರನಾಗಿದ್ದು, ಅವಳ ಹಿಂಭಾಗಕ್ಕೆ ಕಾಣುತ್ತಿದ್ದ ಅಂಗಳದ ಕಡೆಗೆ ಬೆಟ್ಟು ತೋರಿ ಕೇಳಿದನು, "ಅದು ಯಾರು ಅಲ್ಲಿ ನಿಂತಿರುವವರು?" ಎಂದು.

ಅವಳ ಎದೆಯಲ್ಲಿ ಢಕ್ ಎಂದಿತು. ಅವಳು ಊಹಿಸಿದಂತೆ ಅದೇ ರಾಜಕುಮಾರ ಮತ್ತು ಜವಾನ. ಭಯದಿಂದ ತನ್ನ ಗಂಡನ ಕಡೆ ತಿರುಗಿದಳು. ಆದರೆ ಅವನು ಮಾಯವಾಗಿದ್ದನು. ಮತ್ತೆ ಅಂಗಳದ ಕಡೆಗೆ ದೃಷ್ಟಿ ತಿರುಗಿ ಸಲು ಅವರುಗಳೂ ಮಾಯವಾಗಿದ್ದರು. ಯಥಾಪ್ರಕಾರ ಗಂಡನು ಆಕೆಯ ಬಳಿಯಲ್ಲಿಯೇ ಇದ್ದನು. ಆಗ ಅವಳಿಗೆ ಅರಿವಾಯಿತು. ಅವೆಲ್ಲವೂ ಚ್ವಾಂಗ್ ಮಹಾಶಯನ ಮಾಯದ ಆಟವೆಂದು. ತನ್ನನ್ನು ಪರೀಕ್ಷಿಸಲು ಹೂಡಿದ ಮಾಟವೆಂದು. ಹೆಂಗಸಿನ ಅಟಮಟತನದ ಆಟವೆಲ್ಲ ಈಗ ಆಕೆಯಲ್ಲಿ ತಾಟಸ್ಥ್ಯ ಹೊಂದಿತ್ತು. ಆಕೆಯು ಮುಂದೆ ಬಿದ್ದಿದ ಒಂದು ಹಗ್ಗ ದಿಂದ ಕೂಡಲೇ ನೇಣುಹಾಕಿಕೊಂಡಳು.

ಚ್ವಾಂಗ್‌ನು ಇದನ್ನು ನೋಡಿದ. ಜೀವನದಲ್ಲಿ ಜಿಗುಪ್ಸೆ ಹುಟ್ಟಿತು. ಯಾರನ್ನು ತಾನು ನಂಬಬೇಕು? ಯಾರಿಗಾಗಿ ಬಾಳಬೇಕು? ಆಕೆಯ ಶವವನ್ನು ಅದೇ ಪೆಟ್ಟಿಗೆಯಲ್ಲಿಟ್ಟು ಅದರ ಸಮೇತ ಇಡೀ ಮನೆಗೇ ಬೆಂಕಿ ಹೊತ್ತಿಸಿದ. ಸುತ್ತಮುತ್ತಲಿನ ಜನರು ಅದನ್ನು ಆರಿಸಲು ಪ್ರಯತ್ನಪಟ್ಟರು. ಅವರಿಂದೇನೂ ಪ್ರಯೋಜನವಾಗಲಿಲ್ಲ. ಉರಿಯಿಂದ ಉಳಿದ ಎರಡೇ

ವಸ್ತುಗಳೆಂದರೆ, "ನಾನ್ ಹಾನ ಸಾಹಿತ್ಯ" ಮತ್ತು "ಸಾತ್ವಿಕ ಗುಣ ಮತ್ತೂ ನಡತೆಯ ಸೂತ್ರಗಳು." ಎಂಬ ಪುಸ್ತಕಗಳು.

ಚ್ವಾಂಗ್ ಮಹಾಶಯನು ಪಶ್ಚಿಮ ದೇಶಗಳ ಕಡೆಗೆ ತೀರ್ಥಯಾತ್ರೆ ಹೊರಟುಹೋದನೆಂದು ಹೇಳುತ್ತಾರೆ. ಅವನು ಮುಂದೆ ಏನಾದನೆಂದು ಯಾರಿಗೂ ತಿಳಿಯದು. ಒಂದು ವಿಷಯ ಮಾತ್ರ ನಿಜ. ಅವನು ತನ್ನ ಜೀವಮಾನ ಪೂರ್ತಾ ವಿಧುರನಾಗಿಯೇ ಇದ್ದಿರಬೇಕು.



<u>ಬ್ರಿಟನ್ನಿನ ಕಥೆ.</u>

# ಬಾಡಿಗೆ ಮನೆ

ಸುತ್ತುಮುತ್ತಲೂ ಹಣ್ಣು ಹಂಪಲು ತೋಟಗಳು. ಹಚ್ಚ ಹಸುರಿನ ನೆಲ. ಇವುಗಳ ಮಧ್ಯೆ ನಾರ್ಮಂಡಿಯ ದೇಶದಲ್ಲಿ, ಸಮುದ್ರ ತೀರದಲ್ಲಿದ್ದಿತು ಬಹು ಸುಂದರವಾದ ಆ ಮನೆ.

ಆ ಸುಂದರವಾದ ಪುಟ್ಟಮನೆಯು ಏಕಾಂತವಾಗಿ ಅಲ್ಲಿರುವುದನ್ನು ನೋಡಿದಲ್ಲಿ ಯಾರಿಗೇ ಆಗಲೀ ಆಶ್ಚರ್ಯವಾಗದೆ ಇರದು. ಆ ಊರಿನ ಮಿಕ್ಕ ಮನೆಗಳು ತೀರ ಗುಡಿಸಲುಗಳು ಇಲ್ಲವೇ ಒಡ್ಡ ಒಡ್ಡಾಗಿ ಕಟ್ಟಿದ ಮನೆಗಳಾಗಿದ್ದುವು. ಇದು ನವೀನವಾಗಿ ಫ್ರೆಂಚ್ ಮನೆಗಳ ರೀತಿಯಲ್ಲಿ ಕಟ್ಟಿತ್ತು. ಬೆಳ್ಳನೆಯ ಗೋಡೆಗಳು, ಬಲೆ ತಂತಿಯ ಕೆಲಸದಿಂದ ಕೂಡಿದ ವರಾಂಡ, ಸುತ್ತುಮುತ್ತಲೂ ಹಚ್ಚನೆಯ ಗಿಡಗಳಿಂದಲೂ, ಕೆಂಪು ಗುಲಾಬಿಯ ಗಿಡಗಳಿಂದಲೂ ಕೂಡಿದ ತೋಟದ ಮಧ್ಯೆ ವಿರಾಜಿಸುತ್ತಿದ್ದಿತು. ಆ ಮನೆಯ ಸುತ್ತಲೂ ಆವರಿಸಿದ್ದ ಕೈ ತೋಟದ ಸ್ವಲ್ಪ ದೂರಕ್ಕೆ ಸೇಬು ಗಿಡಗಳ ಒಂದು ತೋಟ. ಕುಣಿತವಾಡುತ್ತಿದ್ದ ಗುಂಪು ಒಮ್ಮೆಯೇ ನಿಶ್ಚಲವಾಗಿ ನಿಂತರೆ ಹೇಗಿರುತ್ತದೆಯೋ ಅಂತೇ ಆ ತೋಟವೂ ದೂರಕ್ಕೆ ಕಂಡು ಬರುತ್ತಿದ್ದಿತು. ಮುಂದೆ ದೃಷ್ಟಿಯನ್ನು ಪಸರಿಸಿದರೆ ಹಳದಿ ಬಣ್ಣಕ್ಕೆ ತಿರುಗಿರುವ ಬತ್ತದ ಗದ್ದೆಗಳು ಮೈಲಿ ಮೈಲಿಗೂ ಹರಡಿದ್ದವು. ಆ ಮೇಲೆ ಸಣ್ಣ ಬಂಡೆಗಳು. ಆದರ ಆಚೆ ಸಮುದ್ರವು ಗಂಭೀರವಾಗಿ ಹರಡಿತ್ತು. ನಾನು ಡೈಪಿ ಪಟ್ಟಣದಲ್ಲಿ ತಿಳಿದಿದ್ದ ವಿಷಯವು ಸತ್ಯವೆಂದು ಸಾರುವಂತೆ ಆ ಮನೆಯ ಮೇಲೆ ಒಂದು ಬೋರ್ಡು ಹಾಕಿದ್ದಿತು. ನಿಜ. ಆ ಮನೆಯು ಬಾಡಿಗೆಗಾಗಿಯೇ ಇತ್ತು. ಇದನ್ನು ನೋಡಲಾಗಿಯೇ ನಾನು ಎರಡು ಗಂಟೆಗಳ ಕಾಲದ ದೂರದ ಪ್ರಯಾಣವನ್ನು ಮಾಡಿದ್ದು. ಆ ಮನೆಯ ಬಾಗಿಲಿಗೆ ಹೋಗಿ ಕರೆಘಂಟೆಯನ್ನು ಒತ್ತಿ ಎಳೆದೆ. ಬಹು ಭಾರಿ ಘಂಟೆ. ಆ ಘಂಟೆಯ ಧ್ವನಿ ಬಹು ದೂರದವರಗೂ ಕೇಳಿಸುವುದಾಗಿತ್ತು.

ಏನೇ ಇರಲಿ. ಆ ಶಬ್ದವು ನೂರಡಿ ಆಚೆ ಕೆಳಬೈಲಿನಲ್ಲಿ ಇದ್ದ ಗುಡಿಸಿಲಿಗೆ ಕೇಳಿಸಿತು. ಕೆಲವು ನಿಮಿಷಗಳಲ್ಲಿ ಆ ಗುಡಿಸಿಲಿನ ಹೊರಕ್ಕೆ ಒಬ್ಬ ಹೆಂಗಸೂ, ಗಂಡಸೂ ಬಂದು ಕೆಲಕಾಲ ನನ್ನೆಡೆಗೆ ನೋಡಿ ಮುಂದೆ ಅಡಿ ಇಟ್ಟರು.

ಅವರುಗಳಿಗೆ ನಮಸ್ಕಾರ ಮಾಡಿ "ನೀವೇ ಅಲ್ಲವೇ ಶ್ರೀವರ್ನ್ ಮತ್ತು ಶ್ರೀಮತಿ ಲೊರ್‌ವರ್ನರು?" ಎಂಬುದಾಗಿ ಪ್ರಶ್ನಿಸಿದ್ದಲ್ಲದೆ ಡೈಪಿಪಟ್ಟಣದಲ್ಲಿ ಈ ಮನೆ ಬಾಡಿಗೆಗಾಗಿ ಇದೆಯೆಂದು ತಿಳಿದು ಬಂದುದರಿಂದ ನಾನು ಬಂದಿರುವುದಾಗಿಯೂ, ಮಿಕ್ಕ ವಿಚಾರಗಳನ್ನು ತಮ್ಮಿಂದಲೇ ತಿಳಿಯಬೇಕಾಗಿದೆಯೆಂದೂ ಕೇಳಿದೆ.

ಆದರೆ ವ್ಯಾಪಾರಿಯ ಮನೋವೃತ್ತಿಯ ನನ್ನ ಮಾತುಕಥೆಯು ಅವರನ್ನು ಸ್ತಬ್ಧರನ್ನಾಗಿ ಮಾಡಿತು. ಈ ವಿಚಾರವು ಅವರ ಮನಸ್ಸನ್ನು ಕದಡಿತಲ್ಲದೆ, ದುಃಖವನ್ನೂ ಉಂಟು ಮಾಡಿದಂತೆ ಕಂಡು ಬಂದಿತು.

ಅವರು ತಮ್ಮ ಮುದಿ ಮುಖವನ್ನು ಮೆಲ್ಲನೆ ಎತ್ತಿ, ಕಾತರದೃಷ್ಟಿಯಿಂದ ನನ್ನ ಕಡೆಗೆ ನೋಡಿದರು. ಅವರವರಲ್ಲಿಯೇ ಪ್ರಶ್ನಾರ್ಥಕ ದೃಷ್ಟಿಯನ್ನು ಬೀರಿದರು. ಮುದುಕಿಯು ತನ್ನ ನಡುಗುತ್ತಿರುವ ಕೈಗಳನ್ನು ಎದೆಯ ಮೇಲೆ ಇಟ್ಟುಕೊಂಡು ತಲೆ ತಗ್ಗಿಸಿದಳು. ಆ ಮುದುಕನು ಉತ್ತರ ವೀಯುವ ಮುನ್ನ ಸ್ವಲ್ಪ ಅನುಮಾನಿಸಿ, "ಮಹನೀಯರೇ, ಮನೆಯನ್ನು ನೋಡುವುದಕ್ಕೆ ಬಂದಿರುವಿರಲ್ಲವೇ?" ಎಂದ. "ಅಹುದು. ನಿಮಗೆ ಈಗಾಗಲೇ ನಿಮ್ಮ ದಳ್ಳಾಳಿಯು ನಾನು ಇಂದು ಇಲ್ಲಿಗೆ ಬರುವ ವಿಚಾರವನ್ನು ತಿಳಿಸಿರಬಹುದಲ್ಲವೇ?"

"ನಿಜ. ತಿಳುಹಿದ್ದ. ನಾವೂ ನಿಮ್ಮ ಬರವನ್ನೇ ಕಾಯುತ್ತಿದ್ದೆವು." ಎಂದು ಆತನು ಹೇಳಿ ಸುಮ್ಮನಾದನು. ಆ ವಿಚಾರವನ್ನು ಮುಂದುವರಿಸಿ ಮಾತನಾಡುವಂತೆ ಕಾಣಲಿಲ್ಲ. ಆತನು ಇನ್ನೊಮ್ಮೆ ಪ್ರಶ್ನಾರ್ಥಕ ದೃಷ್ಟಿಯಿಂದ ಹೆಂಡತಿಯ ಕಡೆಗೆ ನೋಡಿದರು. ಆಕೆಯು ಅನುಮಾನಿಸಿ ಅನುಮಾನಿಸಿ ತನ್ನ ಒಪ್ಪಿಗೆಯನ್ನು ಈಯುವಂತೆ ತಲೆಯಾಡಿಸಿದಳು.

ಇದ್ದ ಪರಿಸ್ಥಿತಿಯನ್ನು ವಿಶದಪಡಿಸುವಂತೆ "ನೋಡಿ ಮಹನೀಯರೇ" ಎಂದು ಪ್ರಾರಂಭಮಾಡಿದ. ಎರಡು ಮಾತು ಹಾಗೇ ಪ್ರಾರಂಭ ಮಾಡು ವಲ್ಲಿಗೇ ಮಾತು ನಿಂತಿತು. ಮುಂದೆ ನುಡಿಯಲಾಗದೇ ನಿಲ್ಲಿಸಿದ.

"ಹೋ, ಮನೆಯಾಗಲೇ ಯಾರಿಗಾದರೂ ಬಾಡಿಗೆಗೆ ಕೊಟ್ಟಿದ್ದೀರಾ?" ಎಂದೆ.

"ಇಲ್ಲ. ಮನಯೇನೋ ಇನ್ನೂ ಬಾಡಿಗೆಗೆ ಕೊಟ್ಟಿಲ್ಲ." ಎಂದು ಅವನೆಂದ.

"ಹೋಗಿ ಬೀಗದ ಕೈಯನ್ನು ತೆಗೆದುಕೊಂಡುಬನ್ನಿ" ಎಂದು ಆ ಮುದುಕಿಯು ಬತ್ತಿದ ದನಿಯಲ್ಲಿ ಆತನಿಗೆ ಹೇಳಿದಳು.

ಮುದುಕನು ಅದನ್ನು ತರಲು ಮೆಲ್ಲನೆ ತನ್ನ ಗುಡಿಸಿಲಿನ ಕಡೆಗೆ ಹೆಜ್ಜೆಯಿಟ್ಟ. ಮುದುಕಿಯೂ ನಾನೂ ಇಬ್ಬರೇ ಆದೆವು. ಆಕೆಯೊಂದಿಗೆ ಮಾತನಾಡಲು ಪ್ರಯತ್ನಪಟ್ಟೆ. ಸುತ್ತಮುತ್ತಲಿದ್ದ ತೋಟಗಳ ಸೌಂದ ರ್ಯವನ್ನು ವರ್ಣಿಸಿದೆ. ಆದರೆ ಆಕೆಯು ಸುಮ್ಮನೆ ಹೂಗುಟ್ಟುತ್ತಿದ್ದು ದನ್ನು ನೋಡಿದರೆ ಈಕೆಗೆ ಮಾತನಾಡುವುದರಲ್ಲಿ ಕುತೂಹಲವಿಲ್ಲವೆಂಬು ದನ್ನು ಅರಿತು ಸುಮ್ಮನಾದೆ.

ಇಷ್ಟರಲ್ಲಿ ಬೀಗದ ಕೈಯನ್ನು ಹಿಡಿದು ಮುದುಕನು ಬಂದು ನಮ್ಮನ್ನು ಸೇರಿದ. ಅವರು ಮನೆಯನ್ನು ತೋರಿಸಲು ನನ್ನನ್ನು ಕರೆದುಕೊಂಡು ಮುಂದೆ ನಡೆದರು.

ಮನೆಯಲ್ಲಿ ಎರಡು ಒಳ್ಳೆಯ ಕೋಣೆಗಳಿದ್ದುವು. ಒಂದು ನಾಜೋಕಾದ ಊಟದ ಮನೆಯೂ ಅತ್ಯುತ್ತಮವಾದ ಅಡಿಗೆಯ ಮನೆಯೂ ಇದ್ದಿತು. ಅದರಲ್ಲಿ ಬಹು ಅನುಕೂಲವಾದ ಒಲೆಯೂ, ಸಾಕಷ್ಟು ಗೂಡುಗಳೂ ಇದ್ದುವು. ಆ ಕೋಣೆಗಳೆಲ್ಲವೂ ಹೊಸ ಸಾಮಾನುಗಳಿಂದ ಸಜ್ಜುಗೊಳಿ ಸಿದ್ದು, ತೋಟಗಳ ಸುವಾಸನೆಯ ಗಾಳಿಯು ಆ ಕೋಣೆಯ ದೊಡ್ಡ ಕಿಟಕಿ ಗಳ ಮೂಲಕವಾಗಿ ಧಾರಾಳವಾಗಿ ಬರುತ್ತಿದ್ದಿತು. ಅವುಗಳನ್ನು ನೋಡಿದ ಮೇಲೆ ನನಗುಂಟಾದ ಆನಂದವನ್ನು ಅವರಲ್ಲಿ ವ್ಯಕ್ತಪಡಿಸಿದೆ. ಆಮೇಲೆ ಸ್ವಲ್ಪ ಸ್ವಲ್ಪವಾಗಿ ಅವರ ಮನೋಭಾವವೂ ಬದಲಾಯಿಸುತ್ತಾ ಬಂದಿತು.

ಅವರು ನನ್ನೊಡನೆ ಸ್ವಾಭಾವಿಕವಾಗಿ ಮಾತನಾಡತೊಡಗಿದರು. ಮಾತ ನಾಡುತ್ತಾ ಅವರ ಮಂಕುತನವೂ ದುಃಖವೂ ತೊಲಗಿ ನಾನು ಕೇಳು ತ್ತಿದ್ದ ಪ್ರಶ್ನೆಗಳನ್ನೂ ಉತ್ತರಗಳನ್ನೂ, ನಗುಮುಖದಿಂದ ಸ್ವೀಕ ರಿಸತೊಡಗಿದರು. ಆದರೂ ಅವರ ಭಾವನಾ ಪ್ರಪಂಚದಲ್ಲಿ ಯಾವುದೋ ಜ್ವಾಲೆಯಾವರಿಸಿದ್ದು ಸ್ಪಷ್ಟವಾಗಿ ಕಂಡುಬರುತ್ತಿತ್ತು. ಬಾಗಿಲ ಬೀಗ ವನ್ನು ತೆಗೆಯುವಾಗ ಮುಂಗೈಗಳು ನಡುಗುತ್ತಿದ್ದವು. ಧ್ವನಿಯು ಸಹ ನಡುಗುತ್ತಿದ್ದಿತು. ಅವರ ನಸುನಗುವಿನಲ್ಲಿಯೂ ಏನೋ ಅಸ್ವಭಾವಿಕತೆ ಎದ್ದು ಕಾಣುತಿದ್ದಿತು.

ತಮಗಿದ್ದ ಹಣವೆಲ್ಲವನ್ನೂ ಈಮನೆ ಕಟ್ಟುವುದಕ್ಕಾಗಿ ಉಪ ಯೋಗಿಸಿಕೊಂಡಿದ್ದಾರೆಂದು ಕಾಣುತ್ತದೆ. ಆದ್ದರಿಂದ ಹಣದ ತಾಪತ್ರಯ ಬಹಳವಿರಬಹುದು. ಈಗ ಸರಿಯಾಗಿ ಬಾಡಿಗೆ ಕೊಡುವವನು ದೊರೆಯುವ ನಲ್ಲಾ ಎಂಬ ಆಸೆ ಅವರಲ್ಲಿ ಹುಟ್ಟಿರಬಹುದು ಎಂದುಕೊಂಡೆ.

"ನೀವು ಈ ಮನೆಗೇ ಬರುವವರಾದರೆ ರಾಯರೇ ಮಹಡಿಗೂ ಹೋಗಿ ಮಲಗುವ ಕೋಣೆಗಳನ್ನು ನೋಡಬಹುದು." ಎಂದು ಹೇಳಿದರು ಆ ಮುದುಕರು.

ಮೇಲೆ ಮಲಗುವ ಕೋಣೆಗಳು ಫ್ರೆಂಚ್ ಜನರು ಮಲಗುವ ಕೋಣೆಯು ಹೇಗೆ ಇರಬೇಕೋ ಹಾಗೆ ಸುಸಜ್ಜಿತವಾಗಿತ್ತು. ಸಾಕಷ್ಟು ಬೆಳಕೂ ಗಾಳಿಯೂ ಬರಲು ಅನುಕೂಲವಿತ್ತು. ಸುಂದರವಾದ ಬಟ್ಟೆಗಳನ್ನು ಬಾಗಿಲಿಗೆ ಕಟ್ಟಿ ಇಳಿಬಿಟ್ಟಿದ್ದರು. ಅಚ್ಚುಕಟ್ಟಾಗಿ ಸಾಮಾನುಗಳೆಲ್ಲವನ್ನೂ ಅಣಿಮಾಡಿದ್ದರು. ಒಂದು ಕೋಣೆಯನ್ನು ಯಾರೋ ಉಪಯೋಗಕ್ಕಿಟ್ಟು ಕೊಂಡಿರುವಂತೆ ಕಂಡುಬರುತ್ತಿತ್ತು. ಹೆಂಗಸರು ಬಳಸುವ ಸಾಮಾನುಗಳು ಆ ಕೋಣೆಯಲ್ಲಿ ಅಣಿಮಾಡಿದ್ದಿತು. ನಾವು ನೋಡಿದ ಕೋಣೆಯು ಸಮುದ್ರದ ಅಭಿಮುಖವಾಗಿದ್ದಿತು. ಒಂದೆಡೆಯಲ್ಲಿ ಬರೆಯುವಮೇಜು. ಅದರ ಮೇಲೆ ಲೇಖನಿ, ಮಸಿಕುಡಿಕೆ ಮತ್ತು ಕಾಗದಗಳು. ಇನ್ನೊಂದೆಡೆಯಲ್ಲಿ ಉದ್ದನೆಯ ಕನ್ನಡಿ ಮತ್ತು ಅಲಂಕಾರದ ಸಾಮಾನುಗಳು, ಒಂದು ಬೀರು ವಿನ ತುಂಬಾ ಪುಸ್ತಕಗಳು, ಗೋಡೆಗಳ ಮೇಲೆ ಸೊಗಸಾಗಿ ಕಟ್ಟು ಹಾಕಲ್ಪಟ್ಟ ಪಠಗಳು; ಮರೆಯಲ್ಲಿ ಅವಳ ಉಡಿಗೆತೊಡಿಗೆಗಳನ್ನು ತಗಲು

ಹಾಕಿದ್ದರು. ನೆಲದ ಮೇಲೆ ಅವಳ ಬೂಟು ಮತ್ತು ಚಪ್ಪಲಿಗಳನ್ನು ಜೋಡಿಸಿದ್ದರು. ಹಾಸಿಗೆಯ ಮೇಲೆ ರೇಷ್ಮೆಯ ವಸ್ತ್ರವನ್ನು ಹರಡಿದ್ದರು. ಗೋಡೆಯ ಮೇಲೆ ಗಂಭೀರವಾದ ಏಸುಕ್ರಿಸ್ತನ ಸಿಲುಬೆಗೇರಿಸಿದ ಚಿತ್ರ.

"ಹೋ, ಈ ಕೊಠಡಿಯನ್ನು ಯಾರೋ ಉಪಯೋಗಿಸುತ್ತಿದಾರೆ ಯಲ್ಲವೇ?" ಎಂದೆ. ಶ್ರೀಮತಿ ಲೋರೆನ್ಸರಿಗೆ ನನ್ನ ಮಾತುಗಳು ಕೇಳಿಸಿದಂತೆ ಕಾಣಲಿಲ್ಲ. ಆಕೆಯು ಶೂನ್ಯದೃಷ್ಟಿಯಿಂದ ನೋಡುತ್ತಾ ನಿಂತುಬಿಟ್ಟಿದ್ದಳು. ಆಕೆಯು ನಿಸ್ತೇಜಿತಳಾಗಿದ್ದು ಮನೆಯು ಹೊರಗೆ ಯಾವಾಗ ಹೋಗುವೆವೋ ಎಂಬ ಭಾವವನ್ನು ವ್ಯಕ್ತಪಡಿಸುವಂತೆ ಇದ್ದಿತು. ಶ್ರೀಮರ್ಾ ಲೋರೆನ್ಸರು ಆವೇಶಬಂದವರಂತೆ ಕೈಗಳನ್ನು ನಿಡುಚಾಚಿ "ಇಲ್ಲ ಇಲ್ಲ, ಈ ಕೋಣೆಯನ್ನು ಯಾರೂ ಉಪಯೋಗಿಸುತ್ತಿಲ್ಲ." ಎಂದು ಕೂಗಿಕೊಂಡರು.

ಮನೆಯ ಕೆಳಭಾಗಕ್ಕೆ ಮತ್ತೆ ಬಂದೆವು. ಅಲ್ಲಿ ಬಾಡಿಗೆಯ ವಿಚಾರ ದಲ್ಲಿ ಮಾತುಕಥೆಯಾಯಿತು. ನಾನು ಬೇಸಿಗೆಯ ಪೂರ್ತಿ ಅಲ್ಲಿ ಇರುವುದಾಗಿ ಹೇಳಿದೆ. ಮುದುಕಿಯು ಅದುವರೆವಿಗೂ ನನಗೆ ಅಡುಗೆಗೆ ಸಹಾಯ ಮಾಡುವುದಾಗಿ ಒಪ್ಪಿಕೊಂಡಳು. ಸಾಮಾನು ತರುವುದಕ್ಕಾಗಿ ಆತನು ಬುಧವಾರ ಗಾಡಿಯನ್ನು ಡ್ರೈವಿ ಪಟ್ಟಣಕ್ಕೆ ತರುವುದಾಗಿ ಹೇಳಿದನು.

* * * * *

ಬುಧವಾರ ಗಾಡಿಯಲ್ಲಿ ಹೊರಟೆವು. ಅರ್ಧಘಂಟೆಗಳ ಕಾಲ ಇಬ್ಬರೂ ಮಾತನಾಡಲಿಲ್ಲ. ಇದ್ದಕ್ಕಿದ್ದ ಹಾಗೆ ಮುದುಕರು ಮಾತನಾಡಲು ಪ್ರಾರಂಭ ಮಾಡಿದರು. "ರಾಯರೇ, ಆ ಕೋಣೆ ಉಪಯೋಗಿಸಲ್ಪಡು ತ್ತಿರಬಹುದು ಎಂದಿರಲ್ಲ ಆ ಕೋಣೆ"

"ಹಾ?" ಎಂದೆ

"ನೋಡಿ ಅದರ ವಿಚಾರದಲ್ಲಿ ಸ್ವಲ್ಪ ಮಾತನಾಡಬೇಕಾಗಿದೆ." ಎಂಬುದಾಗಿ ಅನುಮಾನಿಸುತ್ತಾ ಮುಂದೆ ಮುಂದೆ ಅಡಿಯಿಡುತ್ತಿದ್ದ ಕುದುರೆ ಗಳ ಕಡೆಗೆ ದೃಷ್ಟಿಮಾಡಿ ಹೇಳತೊಡಗಿದರು.

"ಏನೆಂದಿರಿ?" ಎಂದೆ ನಾನು.

"ನೋಡಿ ಆ ಕೋಣೆಯನ್ನು ನಮಗೇ ಬಿಟ್ಟುಬಿಡುವಿರಾದರೆ ಬಾಡಿಗೆ ಯಲ್ಲಿ ಸ್ವಲ್ಪ ಕಡಿಮೆ ಮಾಡಲು ಸಿದ್ಧನಿದ್ದೇನೆ. ಆ ಕೋಣೆಯನ್ನು ಮಾತ್ರ ನಮಗೇ ಬಿಡಲು ಆಗುವುದಿಲ್ಲವೇ?" ಎಂದು ಬೇಡಿಕೆಯ ಧ್ವನಿಯಿಂದ ಮತ್ತೆ ಮಾತನ್ನು ಮುಂದುವರಿಸಿದರು. "ನೀವೊಬ್ಬರೇ ಇರುವಿರಿ, ಮನೆಯೋ ಬೇಕಾದಷ್ಟು ದೊಡ್ಡದಿದೆ. ಆದ್ದರಿಂದ ಆ ಒಂದು ಕೋಣೆಯನ್ನು ಬಿಟ್ಟು ಕೊಟ್ಟರೆ ಯಾವ ತೊಂದರೆಯೂ ಆಗಲಾರದಲ್ಲವೇ ರಾಯರೆ?"

ನಾನು ಅದಕ್ಕೆ ಪೂರ್ಣ ಸಮ್ಮತಿಯನ್ನು ಕೊಟ್ಟೆ. ಅವರಿಗೆ ಆ ಕೋಣೆ ಯನ್ನು ಹಾಗೆಯೇ ಇಟ್ಟಿರಬೇಕೆಂಬ ಇಷ್ಟವಿದ್ದಲ್ಲಿ ನನ್ನದೇನು ಅಭ್ಯಂತರ.

"ನಿಮಗೆ ತುಂಬಾ ವಂದನೆಗಳು ರಾಯರೇ. ನೀವು ಈ ವಿಚಾರಕ್ಕೆ ಸಮ್ಮತಿಯನ್ನು ಕೊಟ್ಟರೆಂದು ತಿಳಿದರೆ ನನ್ನಾಕೆಯು ಎಷ್ಟು ಹರ್ಷಪಡುವಳು ಗೊತ್ತೇ" ಎಂದರು.

ಇನ್ನು ಕೆಲವು ಕಾಲ ಪ್ರಯಾಣವನ್ನು ಮಾತಿಲ್ಲದೆಯೇ ಕಳೆದೆವು. ಮತ್ತೆ ಅವರೇ ಮಾತಿಗೆ ಮೊದಲು ಮಾಡಿದರು.

"ನೋಡಿ, ಈ ಮನೆಗೆ ಬಾಡಿಗೆಗೆ ಬರುವವರಲ್ಲಿ ನೀವೇ ಮೊದಲನೆ ಯವರು" ಎಂದರು.

"ಹಾಗೇನು! ಎಂದರೆ ಈ ಮನೆಯು ಬಹಳ ದಿನಗಳಿಂದ ಖಾಲಿ ಇತ್ತೆ?" ಎಂದು ಪ್ರಶ್ನಿಸಿದೆ.

"ಈ ಮನೆಯನ್ನು ನಾನೇ ಕಟ್ಟಿಸಿದೆ. ಅಹುದು, ನಾನೇ ಇದನ್ನು ಕಟ್ಟಿಸಿದೆ." ಎಂದು ಹೇಳಿದವರು ಸ್ವಲ್ಪ ಕಾಲ ತಡೆದು ಮತ್ತೆ ಹೇಳಿದರು, "ನನ್ನ ಮಗಳಿಗಾಗಿ ಐದು ಆರು ವರುಷಗಳ ಹಿಂದೆ, ಇದನ್ನು ಕಟ್ಟಿಸಿದೆ." ಅದನ್ನು ಹೇಳುವಾಗ ಆತನ ಧ್ವನಿಯು ಕುಗ್ಗಿತು. ಅವರು ಹೇಳಬೇಕೆಂದಿದ್ದ ಕಥೆಯಲ್ಲಿ ಅದೇ ಮೊದಲನೆಯ ವಾಕ್ಯವೆಂದು ಕಾಣುತ್ತದೆ.

ಆ ವಿಚಾರವನ್ನು ಕೇಳಲು ಕುತೂಹಲವುಳ್ಳವನಾಗಿರುವೆನೆಂಬುದನ್ನು ತಿಳುಹುವಂತೆ "ಹೊ" ಎಂದೆ. "ನಾನೂ ನನ್ನಾಕೆಯೂ ಒಡ್ಡಜನರೇ ಅನ್ನಿ. ನಾಗರಿಕತೆಯೇನಷ್ಟಿಲ್ಲ" ಎಂದು ಒಮ್ಮೆಯೇ ಗಡಬಡಿಸಿ ನುಡಿದರು. ನನ್ನ ಮೊಣಕಾಲ ಮೇಲೆ ಕೈಯಿಟ್ಟು ನನ್ನನ್ನೇ ದೃಷ್ಟಿಸಿ ನೋಡುತ್ತಾ ಹೇಳತೊಡಗಿದರು.

"ನನ್ನ ಮಗಳು ರೇಷ್ಮೆಯಂತೆ ನಯವಾಗಿದ್ದಳು."

ಮತ್ತೆ ತನ್ನ ಕುದುರೆಯ ಕಡೆಗೆ ದೃಷ್ಟಿಯನ್ನು ಪಸರಿಸಿ ಕೆಲಕಾಲ ಸುಮ್ಮನಿದ್ದರು. ಅತ್ತಲೇ ದೃಷ್ಟಿಯಿಟ್ಟು ಮತ್ತೆ ನುಡಿದರು. ಧ್ವನಿಯು ಒರಟಾಯಿತು. ಆ ಕತೆಯೆಲ್ಲವನ್ನೂ ತನಗೇ ಹೇಳಿಕೊಳ್ಳುತ್ತಿರುವರೋ ಎಂಬಂತೆ ಮಾತನಾಡಲು ಪ್ರಾರಂಭಿಸಿದರು. "ನನ್ನ ಮಗಳಂತಹ ಕನ್ಯೆಯು ಈ ಸುತ್ತಮುತ್ತಲ ಊರುಗಳಲ್ಲಿ ಎಲ್ಲಿಯೂ ಇರಲಿಲ್ಲ. ಬಹು ಸುಂದರ ವಾಗಿದ್ದಳು. ಚಿನ್ನದಂತಹ ಗುಣ. ಸುಸಂಸ್ಕೃತಳು. ರೋಯನ್‌ನಲ್ಲಿ ಅವಳು ವಿದ್ಯಾಭ್ಯಾಸವನ್ನು ಹೊಂದಿದ್ದಳು. ಅಲ್ಲಿನ ಕಾನ್ವೆಂಟಿನಲ್ಲಿ ೧೨ರಿಂದ ೧೮ ವಯಸ್ಸಿನವರೆಗೂ ವಿದ್ಯಾಭ್ಯಾಸದಲ್ಲಿಯೇ ಕಾಲಕಳೆದಿದ್ದಳು. ಆಕೆಗೆ ಇಂಗ್ಲಿಷ್ –ನಿಮ್ಮ ಭಾಷೆಯೂ– ಚೆನ್ನಾಗಿ ಬರುತ್ತಿದ್ದಿತು. ಚರಿತ್ರೆಯ ಪಾಠದಲ್ಲಿ ಮೊದಲನೆಯವಳಾಗಿ ಬಹುಮಾನವನ್ನು ಪಡೆದಿದ್ದಳು. ಅವಳು ಪಿಯಾನೋ ಬಾರಿಸುವುದನ್ನು ಕೇಳಬೇಕು. ಹಾಗೆ ಅಷ್ಟು ಚುರುಕಾಗಿ ಬಾರಿಸುವವರನ್ನೆಲ್ಲೂ ಕಾಣೆ. ಹೇಳಿ ಅಂತಹ ನನ್ನ ಮಗುವಿನ ವಾಸಕ್ಕೆ ನನ್ನ ಗುಡಿಸಲೇ ಸರಿಯೆ?" ಎಂದು ಗದ್ಗದಿಸಿ ಪ್ರಶ್ನಿಸಿದ ಆ ಪ್ರಶ್ನೆಗೆ ಅವನೇ ಉತ್ತರವಿತ್ತ. "ಇಲ್ಲ, ರಾಯರೇ ಆಗದು. ಒಳ್ಳೆಯ ರೇಷ್ಮೆಯನ್ನು ಕೊಳಕು ಪೆಟ್ಟಿಗೆಯಲ್ಲಿಟ್ಟು ಹಾಳುಮಾಡಲು ಯಾರಿಗೆ ತಾನೆ ಮನಸ್ಸು ಬರುತ್ತದೆ. ಆಕೆ ರೇಷ್ಮೆಗಿಂತ ಶುಭ್ರವಾಗಿದ್ದಳು. ಅವಳ ಕೈಗಳು ಮೃದು ವಾಗಿದ್ದವು. ಅವಳ ಹೃದಯ ಮತ್ತೂ ಮೆತ್ತನೆಯದಿತ್ತು. ನಾನು ಗುಲಾಬಿಯ ಹೂವನ್ನು ಮೂಸುವಂತೆ ನಿತ್ಯವೂ ಅದನ್ನು ಮುತ್ತಿಟ್ಟು ಮೂಸುತ್ತಿದ್ದೆ." ಹಿಂದಿನ ಆ ಸವಿನೆನಪುಗಳನ್ನು ನೆನೆಯುತ್ತ ಅವನ ಮಾತು ಕರಗಿತು. ಮತ್ತೆ ಮೌನ ಆವರಿಸಿತು. ಸ್ವಲ್ಪ ಕಾಲದ ಮೇಲೆ ಪ್ರಾರಂಭಿಸಿದ, "ನನ್ನಲ್ಲಿ ಆಗ ಯಥೇಷ್ಟವಾಗಿ ಹಣವಿತ್ತು. ಈ ಸುತ್ತುಮುತ್ತಿಗೆಲ್ಲಾ ಹಣಗಾರನೆಂದರೆ ನಾನೇ ಎಂದು ಹೇಳಬೇಕು. ರೋಯನ್ ಪಟ್ಟಣದಿಂದ ಉತ್ತಮ ಇಂಜಿನಿಯರನ್ನು ಕರೆತರಲು ಆಳನ್ನು ಅಟ್ಟಿದೆ. ಅಲ್ಲಿನ ಉತ್ತಮ ಶಿಲ್ಪಿಯು ನನ್ನ ಮಗುವಿನ ಆ ಮನೆ ಯನ್ನು ಕಟ್ಟಿದಾನೆ. ಅವನು ಅದನ್ನು ಒಬ್ಬ ರಾಣಿಗೆ ತಕ್ಕಂತೆ ಕಟ್ಟಿದ. ಅವಳು ವಿದ್ಯಾಭ್ಯಾಸ ಮುಗಿಸಿ ಬರುವ ವೇಳೆಗೆ ಅನುಕೂಲವಾಗುವಂತೆ

ಆತುರವಾಗಿ ತಯಾರಿಸಿದೆ. ಅತ್ತನೋಡಿ ರಾಯರೆ ಅರಮನೆಗಿಂತ ಏನು ಕಡಿಮೆಯಿದೆ ನನ್ನ ಮಗುವಿನ ಮನೆ? ”

ತನ್ನ ಜೇಬಿನಿಂದ ಒಂದು ಪುಟ್ಟ ಚೀಲವನ್ನು ತೆಗೆದ. ಅದರಲ್ಲಿ ಒಂದು ಭಾವಚಿತ್ರವಿತ್ತು. ಅದನ್ನು ತೆಗೆದು ನನ್ನ ಕೈಗಿತ್ತ. ಅದು ಹದಿನೇಳು ವರುಷದ ಒಬ್ಬ ಸುಂದರ ತರುಣಿಯ ಚಿತ್ರವಾಗಿತ್ತು. ಮುದ್ದು ಗೂಡಿದ ಮಾಟವಾದ ಮುಖ. ನಾನು ಅದನ್ನು ನೋಡುತ್ತಿದ್ದಾಗ ನನ್ನ ತ್ತಲೇ ನೋಡುತ್ತಿದ್ದು, ದೀನಭಾವದಿಂದ, “ ನಿಜವಾಗಿಯೂ ನನ್ನ ಮಗಳು ಚೆಲುವೆಯಲ್ಲವೇ? ” ಎಂದ. ನಾನು ಅದನ್ನು ಹಿಂತಿರುಗಿ ಕೊಡುವಾಗ, ಅಂತಹ ಸಂದರ್ಭದಲ್ಲಿ ಯಾರೇ ಆಗಲೀ ಎಷ್ಟು ಉತ್ತರವೀಯಬಹುದೋ, ಅಷ್ಟು ಹೇಳಿದೆ. ಆತನು ನಡುಗುವ ಕೈಗಳಿಂದ ಅದನ್ನು ಸ್ವಸ್ಥಾನದಲ್ಲಿ ಸೇರಿಸಿ ಒಂದು ಚೀಟಿಯನ್ನು ತೆಗೆದ. ಅದರಲ್ಲಿ ಫ್ರೆಂಚ್ ಪದ್ಧತಿಯಂತೆ ಏಸು ಕ್ರಿಸ್ತನ ಸಿಲುಬೆಯಚಿತ್ರ ಮತ್ತು ಪಕ್ಷಿಯ ಚಿತ್ರವಿತ್ತು. ಅದರ ಕೆಳಗೆ ಹೀಗೆ ಬರೆದಿತ್ತು.

“ ಯೂಲಿಯಾ ಜೋಸ್ಸಫೈನ್ ಮೇರಿ ರೋರೆಕ್ಸ್. ಹುಟ್ಟಿದ್ದು ೧೯ನೇ ಮೇ ೧೮೭೪; ಸಾವು ೧೩ನೇ ಆಗಸ್ಟ್ ೧೮೯೩. ಅವಳಿಗಾಗಿ ದೇವರಲ್ಲಿ ಪ್ರಾರ್ಥಿಸಿ ”.

“ ದೇವರು ಏನು ಮಾಡುವನೋ ಅದೆಲ್ಲವೂ ಅವನಿಗೇ ಗೊತ್ತು. ನನ್ನ ಮುದ್ದು ಮಗುವಿಗಾಗಿ ಆ ಮನೆಯನ್ನು ಕಟ್ಟಿಸಿದೆ. ಅವನು ಆ ಮಗುವನ್ನು ಕಸಿದುಕೊಂಡ. ನಮಗೆ ಹುಚ್ಚು ಹತ್ತುವಷ್ಟು ದುಃಖವಾಯಿತು. ಆದರೆ ಅವನು ಅವಳನ್ನು ಉಳಿಸಿಕೊಡಲಿಲ್ಲ. ಆ ದುಃಖ ನಮ್ಮನ್ನು ಇನ್ನೂ ಬಿಟ್ಟಿಲ್ಲ. ಅವಳನ್ನು ಬಿಟ್ಟು ಮತ್ತೇನನ್ನು ಯೋಚಿಸಲೂ, ಮಾತನಾಡಲೂ ಸಹ ನಮಗೆ ಸಾಧ್ಯವಾಗುತ್ತಿಲ್ಲ. ಅವಳಿಗಾಗಿ ಕಟ್ಟಿಸಿದ ಮನೆಯಲ್ಲಿ ಅವಳಿಲ್ಲದೆ ಇರಲು ಸಾಧ್ಯವಾಗದು. ಅದನ್ನು ಬಾಡಿಗೆಗೆ ಕೊಡಲೂ ಮನಸ್ಸಿರಲಿಲ್ಲ. ಅವಳಿಗಾಗಿ ಕಟ್ಟಿ ಮನೆಯನ್ನೆಲ್ಲಾ ಸಿಂಗರಿಸಿ ಎಲ್ಲಾ ಸಿದ್ಧವಾಗಿದೆ ಎನ್ನುವಾಗ ನಮ್ಮನ್ನು ಬಿಟ್ಟು ಹೊರಟುಹೋದಳು. ರಾಯರೆ ಆ ದುಃಖವನ್ನು ಹೇಗೆ ಸಹಿಸಲಿ? ಯಾರಿಗೋ ಅದನ್ನು ಬಾಡಿಗೆಗೆ ಕೊಟ್ಟುಬಿಡಲಾದರೂ ಹೇಗೆ ಮನ ಬಂದೀತು? ಆದರೆ ಇತ್ತೀಚೆಗೆ ಹಣದ ತೊಂದರೆ ತುಂಬಾ ಆಗಿದೆ. ಸಾಲ

ತೀರಿಸಲಾಗಿ ಬಾಡಿಗೆಗೆ ಕೊಡಲೇ ಬೇಕಾಗಿ ಬಂದಿದೆ. ನೋಡಿ, ಅಲ್ಲದೆ ನಿಮ್ಮಲ್ಲೇನೋ ವಿಶ್ವಾಸ ಹುಟ್ಟಿದೆ. ಇಲ್ಲದಿದ್ದಲ್ಲಿ ಸಾವಿರ ರೂಪಾಯಿ ಕೊಟ್ಟಿದ್ದರೂ ನಾನು ಕೊಡುತ್ತಿರಲಿಲ್ಲ. ಹೋಗಲಿ ನೀವು ಬಾಡಿಗೆಗೆ ಬಂದಿದ್ದು ಬಹಳ ಸಂತೋಷ. ನಿಮಗೆ ನನ್ನ ಮಗುವಿನಲ್ಲಿ ಗೌರವವಿದೆ. ಅಷ್ಟೇ ಸಾಕು. ಆ ಕೋಣೆ ಹಾಗೆಯೇ ಬಿಡುವಿರೆಂದಿರಲ್ಲವೆ? ಅವಳ ವಸ್ತುಗಳು ಅಲ್ಲಿಯೇ ಹಾಗೇ ಇರಲಿ. ಆ ಕೋಣೆಯೇ ಅವಳದಾಗಿದ್ದಿತು."

ಸತಿ ಲೋರೆನ್ಸಳು ನಮ್ಮ ಬರವನ್ನೇ ಕಾಯುತ್ತಿದ್ದಳು. ಗಂಡನೆಡೆಗೆ ಕಾತುರದಿಂದ ನೋಡಿದಳು. ಆತನು ತಲೆಯಲ್ಲಾಡಿಸಿ "ಸರಿ, ಎಲ್ಲಾ ಸರಿಹೋಯಿತು, ರಾಯರು ಆ ವಿಚಾರಕ್ಕೆ ಒಪ್ಪಿಗೆಯನ್ನಿತ್ತಿದಾರೆ" ಎಂದ. ಆ ಮುದುಕಿಯು ನನ್ನ ಕೈಗಳನ್ನು ಅತ್ಯಾತುರದಿಂದ ಹಿಡಿದುಕೊಂಡು ಮುಖವೆತ್ತಿ ನನ್ನನ್ನೇ ನೋಡುತ್ತಾ, "ನೀವು ಬಹು ಒಳ್ಳೆಯವರು, ಬಹಳ ಒಳ್ಳೆಯವರು" ಎಂದು ಉದ್ವಿಗ್ನಳಾದಂತೆ ಹೇಳಿಕೊಂಡಳು. ನಾನು ಆಕೆಯ ಕಣ್ಣುಗಳನ್ನು ನೋಡಲಾರದೇಹೋದೆ. ಅವುಗಳಿಂದ ದುಃಖವೂ ನೋವೂ ಹೊರ ಚೆಲ್ಲುತ್ತಿದ್ದುವು.

* * * * *

ಆ ಮನೆಯಲ್ಲಿ ಮೂರು ತಿಂಗಳು ಕಳೆದೆ. ಈ ಮಧ್ಯೆ ನನಗೂ ಲೋರೆನ್ಸ್ ದಂಪತಿಗಳಿಗೂ ಗೆಳೆತನ ಚೆನ್ನಾಗಿಯೇ ಬೆಳೆಯಿತು. ಶ್ರೀಮತಿ ಲೋರೆನ್ಸಳು ಹೆಚ್ಚು ಆದರದಿಂದ ನೋಡಿಕೊಳ್ಳುತ್ತಿದ್ದಳು. ಅವರಿಬ್ಬರಿಗೂ ಯಾವಾಗಲೂ ಅವರ ಮಗಳ ವಿಷಯವಾಗಿ ಮಾತನಾಡುವ ಹುಚ್ಚು. ನಾನೂ ಅಂತಹ ಸಂದರ್ಭಗಳು ಒದಗಿಬಂದಾಗ ಬೇಜಾರುಪಡದೆ ಕೇಳುತ್ತಿದ್ದೆ. ಅವರ ಆ ಉನ್ಮಾದ, ಕಹಿ ಸವಿ ನೆನಪುಗಳ ಸ್ಮರಣೆಯಿಂದ, ಆ ದುಃಖವನ್ನು ಮರೆಯುವ ರೀತಿಯಲ್ಲಿಯೂ ಸಹ ನಾನು ಒಂದು ಸೌಂದರ್ಯವನ್ನು ಕಂಡೆ. ಆ ಮನೆಯಸುತ್ತ ಮಗುವಿನ ಅಂತರಾತ್ಮ ಸುತ್ತುತ್ತಿರಬೇಕು. ಅವಳಿಗಾಗಿ ಅತಿ ಪ್ರೇಮದಿಂದ ಕಟ್ಟಿದ ಮನೆ ಅದು. ಕಟ್ಟಿ ಮುಗಿಸುವುದರಲ್ಲಿ ದೇವರು ಅವಳನ್ನು ಕೊಂಡೊಯ್ಯುವನು ಎಂದು ಯಾರು ತಿಳಿದಿದ್ದರು. ನನಗೆ ಬೇಜಾರು ಬರುವಷ್ಟುಸಲ ಆ ಮುದುಕ ದಂಪತಿಗಳು ಹೇಳುತ್ತಿದ್ದರು. "ಆ ಕೋಣೆಯನ್ನು ಹಾಗೆಯೇ ಬಿಟ್ಟಿದ್ದು ಬಹಳ ಸಂತೋಷ ರಾಯರೇ" ಎಂದು.

ಒಂದು ದಿನ ಆ ಮುದುಕಿಯು ನನ್ನನ್ನು ಆ ಕೋಣೆಗೆ ಕರೆದೊಯ್ದು ಯೂಲಿಯಳ ನಯವಾದ ಸುಂದರವಾದ ಉಡಿಗೆತೊಡಿಗೆಗಳನ್ನೂ, ಓದುತ್ತಿದ್ದಾಗ ಅವಳು ಬಹುಮಾನವಾಗಿ ಸಂಪಾದಿಸಿದ್ದ ಪುಸ್ತಕಗಳನ್ನೂ ತೋರಿಸಿದಳು. ಮತ್ತೊಂದು ದಿವಸ ಅವಳ ಕಾಗದ ಪತ್ರಗಳನ್ನು ತೋರಿಸಿ "ನೋಡಿ ರಾಯರೇ, ನನ್ನ ಮುದ್ದುಮಣಿಯ ಅಕ್ಷರಗಳು ಹೇಗಿದೆ" ಎಂದಳು. ಮತ್ತೆ ಮುದುಕಿಯು ಆಕೆಯ ಪ್ರತಿಯೊಂದು ಪದಾರ್ಥವನ್ನೂ ತೋರಿದಳು. ಹಾಗೆಯೇ ಆ ಮಗುವಿನ ಬೇರೆ ಬೇರೆ ವಯಸ್ಸಿನಲ್ಲಿ ತೆಗೆದ ಚಿತ್ರಗಳು, ಆಕೆಯ ಉಪಾಧ್ಯಾಯರಿಂದ ಅವಳ ವಿಚಾರವಾಗಿ ಬರೆಯಲಾದ ಕಾಗದಗಳು ಇತ್ಯಾದಿ. ಇದೆಲ್ಲವನ್ನೂ ನೆನೆಸಿಕೊಂಡು ಆ ಮುದುಕಿಯು ಕಣ್ಣೀರು ಕರೆದಳು.

* * * * *

ಸೆಪ್ಟೆಂಬರ್ ತಿಂಗಳು ಡೈಪಿ ಪಟ್ಟಣಕ್ಕೆ ಹಿಂತಿರುಗಿದೆ. ಒಮ್ಮೆ ಆ ಪಟ್ಟಣದ ರಾಜವೀಥಿಯಲ್ಲಿ ಹೋಗುತ್ತಿದ್ದಾಗ, ಹಿಂದೆ ಆ ಮನೆ ಬಾಡಿಗೆಗಿದ್ದ ವಿಷಯವನ್ನು ತಿಳುಹಿದ ಮನುಷ್ಯನು ಭೆಟ್ಟಿಯಾದ. ನಾವಿಬ್ಬರೂ ಲೋರೆನ್ಸರ ವಿಚಾರ ಮಾತನಾಡಿದೆವು. ಅವರ ಪ್ರೀತಿಯು ಅತೀತವಾದುದು ಅವರು ಕಳೆದುಕೊಂಡ ಮಗುವಿನ ವಿಚಾರವಾಗಿ ಯಾವಾಗಲೂ ವ್ಯಥೆಪಡುತ್ತಾರೆ. ನಿಜವಾಗಿಯೂ ಅಂತಹ ಜನರನ್ನು ನಾನು ಎಂದೂ ಕಂಡಿಲ್ಲ. ಇವರುಗಳಿಗೆ ಹುಚ್ಚು ಹಿಡಿಯುವುದೆಂದಿದ್ದೆ. ಅದೂ ಅವರಿಬ್ಬರೇ ಇದ್ದರು. ಆಗ ಇದ್ದ ಅವರ ಮನಸ್ಥಿತಿಯಲ್ಲಿಯೂ ಅವರು ಜೀವ ಹೇಗೆ ಹೊತ್ತರೋ ಏನೋ? ಇನ್ನೊಂದು ವಿಷಯ ನೋಡಿ. ಅವರು ಆಕೆಯ ನೆನಪು ಅಳಿಯದಂತೆ, ಅನುಸರಿಸುತ್ತಿರುವ ಕೆಲವು ರೀತಿಗಳು ನವೀನವಾಗಿಯೂ, ಅದ್ಭುತವಾಗಿಯೂ ಇರುವುದು. ನಿಮಗೆ ತಿಳಿದಿರಬಹುದು. ಆ ಹೊಸ ಮನೆಯಲ್ಲಿನ ಆಕೆಯ ಕೋಣೆಯನ್ನು, ಆಕೆ ಇನ್ನೂ ಆ ಕೋಣೆಯಲ್ಲಿ ವಾಸಿಸುತ್ತಿರುವಳೋ ಎಂಬುವಷ್ಟರ ಮಟ್ಟಿಗೆ ಇಟ್ಟಿದಾರೆ" ಎಂದೆ.

ಆತನು ಭ್ರಾಂತನಾಗಿ "ಅವಳ ಕೊಠಡಿ ಯಾವುದದು?"

"ಅರೆ ನಿಮಗೆ ತಿಳಿಯದೇ ಅವಳು ಮಲಗಲು ಉಪಯೋಗಿಸುತ್ತಿದ್ದ ಕೋಣೆ. ಅವಳು ಇದ್ದಾಗ ಹೇಗಿತ್ತೋ ಅಷ್ಟೇ ಚೆನ್ನಾಗಿ ಇಟ್ಟಿದ್ದಾರೆ. ಅವಳ ಉಡಿಗೆ ತೊಡಿಗೆಗಳನ್ನು"........

"ಏನೋ ನೀವು ಹೇಳುವುದೇ ಅರ್ಥವಾಗುತ್ತಿಲ್ಲ. ಆ ಮನೆಯಲ್ಲಿ ಆಕೆ ಯಾವ ಕೋಣೆಯನ್ನೂ ಉಪಯೋಗಿಸಿದಹಾಗೆ ಕಾಣೆನಲ್ಲ."

"ಅದು ಹೇಗೆ? ಆ ಮನೆಯಲ್ಲಿ ಆಕೆಯ ಹೆಸರಿನಲ್ಲಿ ಒಂದು ಕೊಠಡಿ ಇದೆಯಲ್ಲ!"

ಆತನು ತಲೆಯನ್ನಲ್ಲಾಡಿಸಿ "ಎಲ್ಲೋ ನೀವು ತಪ್ಪು ತಿಳಿದಿರಬೇಕು. ಆಕೆಯು ಸತ್ತಿದ್ದು ಬೇರೆಯ ಮನೆಯಲ್ಲಿಯೇ. ಅವಳು ಸಾಯುವಾಗ ಇದು ಆಗತಾನೇ ಮುಗಿದಿತ್ತು."

"ಇಲ್ಲ ಇಲ್ಲ. ನಿಮ್ಮದಿರಬಹುದು ಆ ತಪ್ಪು ತಿಳುವಳಿಕೆ. ನನಗೆ ಚೆನ್ನಾಗಿ ನೆನಪಿದೆ. ಲೋರೆನ್ಸರು ನನಗೆ ಆ ವಿಚಾರವನ್ನು ಎಷ್ಟೋ ಬಾರಿ ತಿಳುಹಿದಾರೆ."

"ನಾನು ಹೇಳುವುದನ್ನು ಕೇಳಿ. ನನ್ನದು ಅನುಭವ ಸಿದ್ಧವಾದ ಮಾತುಗಳು. ಆ ಹುಡುಗಿ ಸಾಯುವಾಗ ಅಲ್ಲಿದ್ದೆ. ಅವರ ಗುಡಿಸಲನ್ನು ನೋಡಿರಲಿಲ್ಲವೇ ಅಲ್ಲಿಯೇ ಆಕೆಗೆ ಸಾವು ಬಂದುದು. ಅವರಿನ್ನೂ ಆ ಹೊಸ ಮನೆಯ ಗೃಹಪ್ರವೇಶ ಮಾಡಿರಲಿಲ್ಲ. ಆ ಮನೆಗೆ ಹಳೆಯ ಮನೆಯಿಂದ ಸಾಮಾನನ್ನು ಸಾಗಿಸುತ್ತಿದ್ದರು. ಅವಳು ಸಾಯುವ ದಿನ ಎಲ್ಲಾ ಸಾಮಾನುಗಳನ್ನೂ ಸಾಗಿಸಿದ್ದು ಮುಗಿದಿತ್ತು. ಆದರೆ ಆ ಮನೆಯನ್ನು ಆಕೆಯು ಉಪಯೋಗಿಸುವ ಪುಣ್ಯಮಾಡಿ ಬಂದಿರಲಿಲ್ಲ. ಆ ಮನೆಯನ್ನು ನಿಮ್ಮನ್ನು ಬಿಟ್ಟು ಮತ್ತಾರೂ ಇದುವರೆಗೂ ಉಪಯೋಗಿಸಿಲ್ಲ. ಅದನ್ನು ಆತ್ಮಸಾಕ್ಷಿಯಾಗಿ ಹೇಳಬಲ್ಲೆ!"

"ನೀವು ಹೇಳುವುದು ಆಶ್ಚರ್ಯಕರವಾಗಿದೆ." ಎಂದೆ, ನಾನು. ವಿಚಿತ್ರ ವಲ್ಲವೇ ? ಕೆಲವು ನಿಮಿಷಗಳ ಕಾಲ ನನಗೆ ಯಾವುದೂ ಅರ್ಥವಾಗಲಿಲ್ಲ. ಅನಂತರ ನಿಜವಾಗಿಯೂ ಒಂದು ವಿಷಯ ಹೊಳೆಯಿತು.

ಅರ್ಥವಾಯಿತು ನಿಜ. ಅಸತ್ಯವನ್ನು ಸತ್ಯವನ್ನಾಗಿ ಎಣಿಸಿಕೊಂಡಿರುವ ಅವರ ರೀತಿಯು ಈಗ ನನಗೆ ಅರ್ಥವಾಯಿತು. ಆ ಬೆಂದ ಹೃದಯಕ್ಕೆ ಅದು ಬೇಕಾಗಿದ್ದಿತು. ಆದ್ದರಿಂದಲೇ ಅವರು ಅಂತಹ ಸುಂದರ ಸ್ವಪ್ನವನ್ನು ಕಟ್ಟಿ ಆನಂದಿಸುತ್ತಿದ್ದುದು. ಅವಳಿಗಾಗಿ ಕಟ್ಟಿಸಿದ ಮನೆಯಲ್ಲಿ ಆಕೆಯು ಒಂದುದಿವಸ, ಒಂದು ಘಳಿಗೆಯೂ ಸಹ ಇರಲಿಲ್ಲ. ಈ ವಿಷಯವು ಅವರಿಗೆ ಬಹು ಖೇದವನ್ನುಂಟುಮಾಡಿದ್ದಿತು. ಆದ್ದರಿಂದಲೇ ಆಕೆಯ ಸಾಮಾನುಗಳೆಲ್ಲವನ್ನೂ ಅವಳಿಗಾಗಿ ಕಟ್ಟಿಸಿದ ಕೋಣೆಗೆ ಸಾಗಿಸಿ ಎಲ್ಲವನ್ನೂ ಜೋಪಾನವಾಗಿ ಜೋಡಿಸಿ "ಇದೇ ಅವಳಿದ್ದ ಕೋಣೆ," ಎಂದು ಅವಳ ಆತ್ಮಕ್ಕೆ ಸುಳ್ಳು ನುಡಿದರು. ಈ ಕಣ್ಣು ಮುಚ್ಚಾಲೆಯಾಟವನ್ನು ಮಕ್ಕಳಂತಾಡಿದರು. ತಮಗೆ ತಾವೇ ಈ ಮಾಯಾಜಾಲದ ತಂತ್ರವನ್ನು ಹೂಡಿಕೊಂಡರು. ದೇವರು ದಯಾಮಯನೆಂದು ಆತ ಹೇಳಿದ್ದು ಸರಿ. ಕೊನೆಗಾದರೂ ಆ ಸುಳ್ಳಿನ ಕಂತೆಯಲ್ಲಿಯೇ ಸತ್ಯವನ್ನು ಕಂಡು ಮನಃಶಾಂತಿಯನ್ನು ಕಂಡಿದ್ದರು.

ಸತ್ಯ – ಅಸತ್ಯ ? ಆ ಸುಂದರ ಕನಸಿನಚಿತ್ರ ಸತ್ಯ ಎನ್ನಬಾರದು.<br>ಸತ್ಯ ನಮಗೆ ಕರುಣಿಸಿ ಕರೆದ ನಗೆ ಎನ್ನೋಣವೇ ಅದನ್ನು ?



ಜರ್ಮನಿಯ ಕಥೆ

# ಹೆಂಡತಿಯ ಖಾಯಿಲೆ

ಮಾನವನ ಸುಖ ಸಂಸಾರದ ಮಧ್ಯೆ ಬರುವ ತೊಂದರೆಗಳೆಷ್ಟೆಂದು ಹೇಳೋಣ? ಅವುಗಳ ಕಾರಣಗಳನ್ನು ವಿಚಾರಿಸುವುದು ಅತಿ ಆವಶ್ಯಕ. ಅವುಗಳಿಂದಾಗುವ ತೊಂದರೆಗಳನ್ನು ನೆನೆದರೆ ಅವು ಬರುವ ಮೊದಲೇ ಸುಧಾರಿಸುವ ಉಪಾಯ ಮಾಡುವುದು ಒಳ್ಳೆಯದೆಂದು ಕಾಣುತ್ತದೆ.

ತನ್ನ ಗಂಡನ ಮೆಚ್ಚಿನ ಮಡದಿಯಾದ ಸುಂದರ ಯುವತಿ ಸಲ್‌ಫಿಕಾ ಒಂದು ದಿನ ತನ್ನ ಗೆಳತಿಯೊಬ್ಬಳನ್ನು ನೋಡಲು ಹೋದಳು. ಹಿಂತಿರುಗಿ ಬಂದವಳೇ ಹಾಸಿಗೆ ಹಿಡಿದು ಮಲಗಿಬಿಟ್ಟಳು. ಆರೋಗ್ಯವಾಗಿದ್ದಳು; ಆದರೆ ಅರ್ಧ ಸತ್ತವಳ ಹಾಗೆ ಕಾಣುತ್ತಿದ್ದಳು. ಅಂತಹ ಸ್ಥಿತಿಯಲ್ಲಿ ಯಾರಿಗೆ ತಾನೆ ಸಂಯಮದಿಂದಿರಲು ಸಾಧ್ಯ? ಮದುವೆಯಾಗಿ ಸರಿಯಾಗಿ ಒಂದು ವರುಷಕೂಡ ಆಗಿರಲಿಲ್ಲ. ಹೀಗಿರುವಲ್ಲಿ ಹೆಂಡತಿಯೊಡನೆ ಬೇಜಾರು ಬಂದಿರಲು ಸಾಧ್ಯವಿಲ್ಲ. ಕೂಡಲೇ ಒಬ್ಬ ವೈದ್ಯನಿಗೆ ಹೇಳಿ ಕಳುಹಿಸಿದ. ಒಬ್ಬ ಯುವಕ ಡಾಕ್ಟರ್ ಠೀವಿಯಿಂದ ಮನೆಯ ಒಳಗೆ ಪ್ರವೇಶಮಾಡಿದ. ಖಾಯಿಲೆಹೆಂಗಸಿನ ಹಾಸಿಗೆಯ ಬಳಿ ಕುಳಿತು ಖಾಯಿಲೆಗೆ ಸರಿಯಾದ ಔಷಧಿಯನ್ನು ತಿಳಿಸುವವನ ಹಾಗೆ ತೋರಿಕೆಯಿಂದ ಇದ್ದ. ಆಕೆಯ ನಾಡಿ ಹಿಡಿದು ನೋಡಿದ. ತನ್ನ ವೈದ್ಯಕೀಯ ಪುಸ್ತಕಗಳು ಈ ಬಗ್ಗೆ ಏನು ತಿಳಿಸುವುದೆಂಬುದನ್ನು ವಿಚಾರ ಮಾಡತೊಡಗಿದ. ಕಾಗದ ಮಸಿಯನ್ನು ತರಹೇಳಿ ಬರೆಯಲು ತೊಡಗಿದ. ಅನಂತರದಲ್ಲಿ ಔಷಧಿಯನ್ನು ತರಲು ಒಬ್ಬ ಆಳನ್ನು ಅಟ್ಟಿದ. ಇಷ್ಟರಲ್ಲಿ ಕಾತುರನಾದ ಗಂಡನು ಖಾಯಿಲೆ ಏನಿರ ಬಹುದೆಂದು ಕೇಳಲು ಡಾಕ್ಟರು ನಗುತ್ತಾ ಹೀಗೆ ಹೇಳಿದ.

" ಖಾಯಿಲೆ ಏನೆಂದು ಕೇಳಿದಿರಲ್ಲವೆ? ಆ ವಿಚಾರ ನಿಮಗೆ ತಿಳಿಸ ಬೇಕಾದಂತಹದೇನೂ ಅಲ್ಲ. ನಿಮಗೆ ಗೊತ್ತಿಲ್ಲವೆ ಯುವತಿಯರಿಗೆ ಹೀಗೇ —ಬಯಕೆ........ವಾಂತಿ........ಅದೆಲ್ಲ........ಎಲ್ಲವೂ ಒಳ್ಳೆಯದಕ್ಕೆ "

ಈ ವಿಷಯ ಕೇಳಿದ ಕೂಡಲೇ ಗಂಡನಿಗೆ ಪರಮಾನಂದವಾಯಿತು.

ರಾತ್ರಿಯಾಯಿತು. ಔಷಧಿಯ ಸೇವನೆಯೂ ಆಗಿತ್ತು. ಆದರೆ ಅದರಿಂದ ಪ್ರಯೋಜನವೇನೂ ಆದಂತೆ ಕಾಣಲಿಲ್ಲ. ಇನ್ನೊಬ್ಬ ವೈದ್ಯನನ್ನು ಕರೆಸಲೇಬೇಕಾಯಿತು.

ಸ್ವಲ್ಪ ಸುಧಾರಿಸಿ! ಇನ್ನೇನು ಆಕೆಯ ಖಾಯಿಲೆಯ ನಿಜಸ್ಥಿತಿಯು ತಿಳಿಯುತ್ತದೆ. ಈ ಡಾಕ್ಟರು ಖಂಡಿತವಾಗಿ ಹೇಳಿಬಿಡುತ್ತಾನೆ. ಅನುಮಾನವಿದ್ದಹಾಗೆ ಕಾಣೆ. ಆಕೆಗೆ 'ಅಮ್ಮ' ಏಳುತ್ತಿರಬಹುದಷ್ಟೆ!

ಸರಿ ಮೊದಲು ಆಕೆ ತಾಯಾಗುವುದರಲ್ಲಿದ್ದಳು. ಆಯಿತು ಈಗ 'ಅಮ್ಮ' ಏಳುತ್ತಿದೆ. ಸಾಕು ನಿಮ್ಮ ಹೇಳಿಕೆ ನಿಲ್ಲಿಸಿರಿ ಡಾಕ್ಟರುಗಳೆ. ನೀವೂ ನಿಮ್ಮ ಔಷಧಿಗಳೂ ಸಾಕು. ನಿಮ್ಮಿಬ್ಬರಲ್ಲಿ ಒಬ್ಬರಾದರೂ ತಪ್ಪು ಹೇಳಿರಬಹುದಲ್ಲವೆ! ಗುಣಹೊಂದಲು ಪ್ರಕೃತಿಗೇ ಬಿಡುವುದು ಲೇಸೆಂದು ಕಾಣುತ್ತದೆ. ಖಾಯಿಲೆಯು ಎಷ್ಟೇ ಭಯಂಕರವಾಗಿರಲಿ, ಈ ಡಾಕ್ಟರುಗಳ ಅವಾಂತರಕ್ಕಿಂತಲೂ ಸುಮ್ಮನಿರುವುದು ಎಷ್ಟೋ ಮೇಲು.

ಇನ್ನೂ ಸ್ವಲ್ಪ ಸುಧಾರಿಸಿ! ಇವತ್ತು ಗುಣಹೊಂದಬಹುದೇನೋ ನೋಡೋಣ. ಆಕೆಯ ಗಂಡನಂತೂ ಒಂದು ನಿಮಿಷವೂ ಎಡೆಬಿಡದೆ ಆಕೆಯ ಹಾಸಿಗೆಯ ಬಳಿಯೇ ಇರತೊಡಗಿದ. ಅರ್ಧಘಂಟೆಯಲ್ಲಿ ಅರವತ್ತು ಸಾರಿ ಕೇಳಿದ್ದಾನೆ, "ಈಗ ಸ್ವಲ್ಪವಾಸಿಯೆ. ಈಗ ಸ್ವಲ್ಪವಾಸಿಯೇ" ಎಂದು. ಅಯ್ಯೋ ಮನುಷ್ಯನೆ! ನಿನ್ನ ಉಪಚಾರದ ಪ್ರಶ್ನೆಗಳಿಂದೇನು ಪ್ರಯೋಜನ? ಅದಿನ್ನೂ ಆಕೆಯ ಸ್ಥಿತಿಯನ್ನು ವಿಷಮಿಸುತ್ತದೆಯಲ್ಲವೆ?

ಆಕೆಯು ಮೇಲುಸಿರನ್ನು ಬಿಡುತ್ತಾ ಉತ್ತರವೀಯುತ್ತಿದ್ದಳು. ಆಕೆಯ ಮಾತುಗಳನ್ನು ಆಲಿಸಿದಲ್ಲಿ ನೋವು ಕ್ರಮವಾಗಿ ಹೆಚ್ಚಾಗುತ್ತಿದೆಯೆಂಬುದು ಸ್ಪಷ್ಟವಾಗಿ ತೋರುತಿತ್ತು. ಅಯ್ಯೋ ಪಾಪ; ಹೆಣ್ಣೇ! ಸಾವು ಸಮೀಪಿಸುತಿತ್ತು. ಈ ನೋವನ್ನು ಅನುಭವಿಸುವುದಕ್ಕಿಂತ ಸಾವೇ ಮೇಲು.

ಓ. ಕೇಳಿ. ಯಾರು ಬಾಗಿಲು ತಟ್ಟುವುದು? ಇನ್ನೊಬ್ಬ ಡಾಕ್ಟರಿರಬಹುದು.

ಅಲ್ಲ ಅಲ್ಲ.

ಅವನೊಬ್ಬ ದರ್ಜಿಯವನು. ಒಳ್ಳೆಯ ಸಮಯದಲ್ಲಿಯೇ ಬಂದಿದಾನೆ.

"ಓ! ಬಟ್ಟೆಯನ್ನು ತಂದಿದಾನೆಯೆ? ಅಯ್ಯೋ ನಾನು ಸಾಯು ವುದರಲ್ಲಿದ್ದೇನಲ್ಲ. ನನಗೆ ದೇವರು ಇನ್ನೂ ಹೆಚ್ಚು ಆಯುಷ್ಯವನ್ನು ಬರೆ ದಿದ್ದರೆ ಅದೇ ತರಹದ ಬಟ್ಟೆಯನ್ನು ಹೊಲಿಸಿಕೊಳ್ಳುತ್ತಿದ್ದೆ. ನನ್ನ ಸ್ನೇಹಿತ ಳನ್ನು ನೋಡಲು ಹೋಗಿದ್ದಾಗ ಆಕೆಯು ಅಂತಹ ಬಟ್ಟೆಯನ್ನೇ ಧರಿ ಸಿದ್ದಳು. ಎಷ್ಟು ಚೆನ್ನಾಗಿದ್ದಿತು. ಪ್ರಪಂಚದಲ್ಲಿಯೆಲ್ಲಾ ಅತ್ಯುತ್ತಮವಾದ ಉಡಿಗೆಯಂತಿತ್ತು. ಅಯ್ಯೋ ನನ್ನ ಬಾಳು ಬಹು ಕ್ಷಣಿಕವಾಯಿತು." ಎಂದು ಆಕೆಯು ಮೆಲುದನಿಯಲ್ಲಿ ತನ್ನ ಗಂಡನಿಗೆ ತಿಳಿಸಿದಳು.

ಉತ್ಸಾಹಗೊಳ್ಳು. ಧೈರ್ಯಗುಂದಲು ಸಮಯವಲ್ಲ ಗಂಡನೇ! ಕೇಳಿಸುವುದಿಲ್ಲವೆ? ನಿನ್ನಾಕೆಯು ಸರಾಗವಾಗಿ ಮಾತನಾಡುತ್ತಿದಾಳೆ. ಆಕೆಗೆ ಉಸಿರಿನ್ನೂ ನಿಂತಿಲ್ಲ.

ದರ್ಜಿಯವನು ಕೋಣೆಯನ್ನು ಬಿಟ್ಟು ಹೋದ. ಗಂಡನು ಅವನನ್ನು ಹಿಂಬಾಲಿಸಿದ. ಅವರಿಬ್ಬರೂ ಸ್ವಲ್ಪಕಾಲ ಏನೇನೋ ಮಾತನಾಡಿದರು. ದರ್ಜಿಯವನು ದಡಬಡಿಸುತ್ತಾ, ಆಣೆಯಿಟ್ಟು ಕೊಟ್ಟಿರುವ ಮಾತನ್ನು ತಪ್ಪದೆ ನಡೆಸಿಕೊಡುವುದಾಗಿ ಹೇಳಿ ಹೊರಟು ಹೋದನು. ದರ್ಜಿಯವನು ಸಂಜೆಯೊಳಗಾಗಿ ಹಿಂತಿರುಗಿ ಬಂದು, ಇನ್ನೂ ಹಾಸಿಗೆ ಹಿಡಿದಿರುವ ಸಲ್‌ಫಿಕಾಳ ಕೋಣೆಯ ಒಳಹೊಕ್ಕನು.

ಅವನು ಒಂದು ಸಾಧಾರಣ ಬಟ್ಟೆಯಲ್ಲಿ ಸುರುಳಿ ಸುತ್ತಿದ್ದ ವಸ್ತುವನ್ನು ಹೊರತೆಗೆದನು. ಆಗ ಕಣ್ಣಿಗೆ ಬಿದ್ದ ದೃಶ್ಯವೇನು ಗೊತ್ತೇ? ಅದೇ ಸುಂದರವಾದ ಸೊಗಸಾದ ಬಟ್ಟೆ. ಆದರೆ ಅದರಿಂದ ಪ್ರಯೋಜನವಾದರೂ ಏನು! ಅದನ್ನು ಉಪಯೋಗಿಸಲು ಆಕೆಯು ಬದುಕುವ ಆಸೆಯಾದರೂ ಇದೆಯೇ? "ನನ್ನ ಮುದ್ದು ಮಣಿ. ನೀನು ಗುಣಹೊಂದಿ ಇದನ್ನು ಧರಿಸಿ ಓಡಾಡುವಂತಾದರೆ ಏನು ಬೇಕಾದರೂ ಕೊಟ್ಟೇನು?" ಎಂದು ಗಂಡನು ಪ್ರಲಾಪಿಸಿದನು. ಅದಕ್ಕೆ ಆಕೆಯು "ಅಯ್ಯೋ! ಏನು ಮಾಡಲಿ ನಿಶಕ್ತಿ ಹೆಚ್ಚಾಗಿದೆ. ಆದರೂ ನಿನ್ನ ಆಸೆಯನ್ನು ದೂರ ಮಾಡಲಾರೆ ಎಷ್ಟೇ ಹೆಚ್ಚು ನಿಶ್ಶಕ್ತಿಯಿರಲಿ ಇಂದೇ ಅದನ್ನು ತೊಟ್ಟು ಓಡಾಡಲು ಶ್ರಮಿಸುತ್ತೇನೆ" ಎಂದಳು.

ಉಟ್ಟ ಸೀರೆಯನ್ನು ಕಳಚಿ ಅದನ್ನು ಉಡಲು ಅನುವಾಗುವಂತೆ ಬಟ್ಟೆಯನ್ನು ಮರೆಮಾಡಿದರು. ಒಂದು ವರುಷ ಖಾಯಿಲೆಯಿಂದ ನರಳಿ ನಿಶ್ಯಕ್ತಳಾದಷ್ಟು ಕಳೆಗುಂದಿದ್ದ ಆಕೆಯು ಹೇಗೋ ಎದ್ದಳು. ಬಟ್ಟೆಯನ್ನು ಉಟ್ಟಮೇಲೆ, ಕುಳಿತು ಕಾಫಿಯನ್ನು ಕುಡಿದಳು. ಕೊನೆಗೆ ಖಾಯಿಲೆಯು ಸಂಪೂರ್ಣವಾಗಿ ಮಾಯವಾದಂತೆ ಕಂಡುಬಂದಿತು.

ಆ ಬಟ್ಟೆಯೇ ಅವಳ ಖಾಯಿಲೆಯ ಔಷಧಿಯಾಗಿ ಪರಿಣಮಿಸಿತು. ಯಾವ ವೈದ್ಯನೂ ವಾಸಿಮಾಡಲಾಗದ ರೋಗವನ್ನು ವಾಸಿಮಾಡಲು ದರ್ಜಿಗೆ ಸಾಧ್ಯವಾಯಿತಲ್ಲವೆ?



ರಷ್ಯಾದ ಕಥೆ

# ಲಾಯರ ಸೆರೆಮನೆಯ ಜೀವನ

ಇಂದು ವಸಂತ ಋತುವಿನ ಕಗ್ಗತ್ತಲೆಯ ರಾತ್ರಿ ನಮ್ಮೂರ ಜಹಗೀರುದಾರರು ಹಿಂದೊಮ್ಮೆ ಹದಿನೈದು ವರುಷಗಳಕೆಳಗೆ ತಾವಿತ್ತ ಔತಣವನ್ನು ಜ್ಞಾಪಿಸಿಕೊಳ್ಳುತ್ತಾ ಮನೆಯ ಅಂಗಳದಲ್ಲಿ ತಿರುಗಾಡುತ್ತಿದ್ದರು. ಅಂದಿನ ಔತಣಕ್ಕೆ ದೊಡ್ಡ ದೊಡ್ಡ ಮನುಷ್ಯರೂ, ವಿದ್ಯಾವಂತರೂ, ವಿವೇಕಿಗಳೂ ದಯಮಾಡಿಸಿದ್ದರು. ಬಹು ಶ್ಲಾಘ್ಯವಾದ ವಿಚಾರಾತ್ಮಕವಾದ ವಿಷಯಗಳನ್ನು ಕುರಿತು ಮಧ್ಯೆ ಮಧ್ಯೆ ಮಾತನಾಡಿದರು. ಆ ವಿಷಯಗಳಲ್ಲಿ ದೇಹಾಂತ ಶಿಕ್ಷೆಯೂ ಒಂದು ವಿಷಯ. ಚರ್ಚೆಗೆ ಬಂದಾಗ ಬಹುಮಂದಿ ಈ ದೇಹಾಂತ ಶಿಕ್ಷೆಯನ್ನೂ ಖಂಡಿಸಿದರು. ಈ ದೇಹಾಂತ ಶಿಕ್ಷೆಯನ್ನು ಸಂಪೂರ್ಣವಾಗಿ ನಿಲ್ಲಿಸಿ ಅದಕ್ಕೆ ಬದಲಾಗಿ ಜೀವಾವಧಿಯ ಶಿಕ್ಷೆಯನ್ನು ವಿಧಿಸುವುದು ಉಚಿತವೆಂದು ಕೆಲವರು ಸೂಚಿಸಿದರು.

ಜಹಗೀರುದಾರರು "ನನಗೆ ನಿಮ್ಮ ಮಾತೊಂದೂ ಸರಿತೋರುವುದಿಲ್ಲ. ನಾನು ಈ ಎರಡು ಶಿಕ್ಷೆಗಳಲ್ಲಿ ಯಾವುದನ್ನೂ ಅನುಭವಿಸದೆಯೇ ಇದ್ದರೂ ನನಗೆ ತೋರುವ ಇಷ್ಟನ್ನು ಮಾತ್ರ ಹೇಳಬಲ್ಲೆ. ನನಗೆ ಜೀವಾವಧಿಯ ಶಿಕ್ಷೆಗಿಂತ ದೇಹಾಂತ ಶಿಕ್ಷೆಯೇ ಲೇಸೆಂದು ತೋರುವುದು. ದೇಹಾಂತ ಶಿಕ್ಷೆಯಲ್ಲಿ ಮನುಷ್ಯನನ್ನು ಒಮ್ಮೆಗೇ ಇಹಲೋಕದಿಂದ ಕಳುಹಿಸಿ ಬಿಡುವಿರಿ. ಇವುಗಳಲ್ಲಿ ಯಾವುದು ಒಳ್ಳೆಯದೆಂಬುದನ್ನು ನೀವೇ ಯೋಚಿಸಿ" ಎಂದರು.

ಅಲ್ಲಿಗೆ ಬಂದಿದ್ದ ಅತಿಥಿಗಳು: "ಇವೆರಡೂ ಶುದ್ಧ ತಪ್ಪು. ಏಕೆಂದರೆ ಇವೆರಡರ ಉದ್ದೇಶವೂ ಒಂದೇ ಆಗಿದೆ. ಯಾರಿಗೇ ಆಗಲಿ ಒಬ್ಬರ ಜೀವವನ್ನು ತೆಗೆಯುವುದಕ್ಕೆ ಯಾವ ಅಧಿಕಾರವೂ ಇಲ್ಲ" ಎಂದರು.

ಈ ಔತಣಕ್ಕೆ ಬಂದಿದ್ದವರಲ್ಲಿ ಒಬ್ಬರು ಲಾಯರು. ಈ ವಿಷಯದಲ್ಲಿ ಅವರ ಅಭಿಪ್ರಾಯವೇನೆಂದು ಕೇಳಲು ಅವರು ಹೇಳಿದರು.

"ದೇಹಾಂತ ಶಿಕ್ಷೆಯೂ, ಜೀವಾವಧಿ ಶಿಕ್ಷೆಯೂ, ಇವೆರಡೂ ಶುದ್ಧ ಅನ್ಯಾಯವಾದುವೇ. ಆದರೆ ಇವೆರಡರಲ್ಲಿ ನೀನು ಯಾವುದನ್ನು ಕೋರು

ವೆಯೆಂದು ಕೇಳಿದಲ್ಲಿ ಜೀವಾವಧಿಯ ಶಿಕ್ಷೆಯನ್ನೇ ಇಚ್ಛಿಸುತ್ತೇನೆ. ಏಕೆಂದರೆ ಸಾಯುವುದಕ್ಕಿಂತಲೂ ಹೇಗಾದರೂ ಬದುಕಿರುವುದೇ ಮೇಲೆಂದು ನನಗೆ ತೋರುತ್ತದೆ" ಎಂದು ಹೇಳಿದರು.

ಇವರು ಹೀಗೆ ಹೇಳಿದ ಮೇಲೆ ಮತ್ತೆ ಚರ್ಚೆಗೆ ಪ್ರಾರಂಭವಾಯಿತು. ಇನ್ನೂ ಯುವಕರಾಗಿದ್ದ ಜಹಗೀರುದಾರರು ಬಹು ಕೋಪೋದ್ರೇಕಿತರಾಗಿ ಎದ್ದು, ಮೇಜನ್ನು ಗುದ್ದಿ, ಲಾಯರಿಗೆ ಈ ರೀತಿ ನುಡಿದರು.

"ಸ್ವಾಮಿ ಲಾಯರೇ, ಸಾಕು ಬಾಯಿ ಮುಚ್ಚಿ! ಸುಮ್ಮನೆ ವಾದಿಸಿದರೆ ಬಂತೇ ಭಾಗ್ಯ? ಬೇಕಾದರೆ ಎರಡು ಲಕ್ಷ ರೂಪಾಯಿ ಬಾಜಿ ಕಟ್ಟುತ್ತೇನೆ. ನೀವು ಐದು ವರ್ಷಗಳ ಕಾಲ ಕೂಡ ಆ ರೀತಿಯಲ್ಲಿ ಸೆರೆಮನೆಯಲ್ಲಿ ಇರಲಾರಿರಿ."

ಅದಕ್ಕೆ ಲಾಯರು: "ಏನು? ಹಾಗೇನು! ನೀವು ಖಂಡಿತವಾದಿಗಳಾದರೆ, ಐದೇಕೆ ಹದಿನೈದು ವರುಷಗಳ ಕಾಲ ಇರಬಲ್ಲೆ" ಎಂದರು.

"ಹದಿನೈದು ವರುಷವೇ? ಸರಿ ಬಿಡಿ; ಇಗೋ ಪಣ ಇಟ್ಟೆ, ಎರಡು ಲಕ್ಷ ರೂಪಾಯಿಗಳು!" ಎಂದು ಗದರಿಸಿ ನುಡಿದರು.

ಲಘುಹಾಸ್ಯಕ್ಕೆಂದು ಆರಂಭವಾದ ಮಾತುಕತೆಗಳು ಇಂತಹ ಪರಿಸ್ಥಿತಿಯನ್ನು ತಂದೊಡ್ಡಿತು. ಲಕ್ಷಾವಧಿ ಆಸ್ತಿಯನ್ನು ಹೊಂದಿದ್ದ ನಮ್ಮ ಜಹಗೀರುದಾರರು ಮದೋನ್ಮತ್ತರಾಗಿದ್ದರು. ದುಡ್ಡಿನ ವಿಷಯವನ್ನು ಯೋಚಿಸಲೇ ಇಲ್ಲ. ಊಟಮಾಡುವಾಗ ನಗುಮುಖದಿಂದ ಜಹಗೀರುದಾರರು ಲಾಯರಿಗೆ "ಲಾಯರೇ, ಹುಚ್ಚರಾಗಬೇಡಿರಿ. ಸ್ವಲ್ಪ ಯೋಚಿಸಿ. ನನಗೆ ಎರಡು ಲಕ್ಷ ರೂಪಾಯಿಗಳೇನೋ ಹೆಚ್ಚಿನದಲ್ಲ. ನೀವಾದರೋ ನಿಮ್ಮ ಕಾಲು ಭಾಗ ಆಸ್ತಿಯನ್ನೇ ಪೋಲುಮಾಡಲು ಹೊರಟಿರುವಿರಲ್ಲಾ? ನಿಜವಾಗಿಯೂ ಜೇಲಿನ ಜೀವನವನ್ನು ಹೊಂದಿ ಏಕಾಂತವಾಗಿರುವುದು ತುಂಬ ಕಷ್ಟವಾದುದು.

*     *     *     *     *

ಇಂದು ದೇಹಾಂತ ಶಿಕ್ಷೆಯ ವಿಚಾರವಾಗಿಯೇ ಯೋಚಿಸುತ್ತಾ, ಅತ್ತಿತ್ತ ತಿರುಗಾಡುತ್ತಾ ಜಹಗೀರುದಾರರು ತಮ್ಮಲ್ಲಿಯೇ ಈ ರೀತಿಯಾಗಿ ಗುಣು ಗುಣಿಸ ತೊಡಗಿದರು:

"ನಾನೇಕಂದು ಇಂತಹ ಹುಚ್ಚು ಕೆಲಸವನ್ನು ಮಾಡಿಕೊಂಡೆ. ಇದ ರಿಂದಾದ ಪ್ರಯೋಜನವೇನು? ಲಾಯರಾದರೋ ತಮ್ಮ ಹದಿನೈದು ವರು ಷದ ಜೀವಮಾನವನ್ನು ವ್ಯರ್ಥಮಾಡಿಕೊಳ್ಳುವರು. ನಾನು ನನ್ನ ಎರಡು ಲಕ್ಷ ರೂಪಾಯಿಗಳನ್ನು ಚೆಲ್ಲಬೇಕಾಗಿದೆ. ಇದು ದೇಹಾಂತ ಶಿಕ್ಷೆ ಮತ್ತು ಜಿವಾವಧಿ ಶಿಕ್ಷೆ ಇವುಗಳಲ್ಲಿ ಯಾವುದು ಒಳ್ಳೆಯದೆಂಬುದನ್ನು ಪ್ರಪಂಚಕ್ಕೆ ತಿಳಿಸಲು ಸಹಕಾರಿಯೆ? ಎಂದಿಗೂ ಇಲ್ಲ. ಇದೆಲ್ಲವೂ ಶುದ್ಧ ಹುಚ್ಚುತನ. ನನ್ನ ಕೊಬ್ಬು ನನ್ನನ್ನು ಮರುಳು ಮಾಡಿತು. ಲಾಯರು ದುಡ್ಡಿನಾಸೆಗಾಗಿ ಅಂತಹ ಘೋರ ಜೀವನಕ್ಕೆ ಒಪ್ಪಿಕೊಂಡ."

ಜಹಗೀರುದಾರರು ಅಂದು ಔತಣದ ತರುವಾಯ ನಡೆದುದೆಲ್ಲವನ್ನೂ ಮನಸ್ಸಿಗೆ ತಂದುಕೊಂಡರು. ಅಂದಿನಿಂದ ಲಾಯರು ಜಹಗೀರುದಾರರ ಮನೆಯ ಬಳಿಯ ಹೂದೋಟದ ಎಡ ಪಾರ್ಶ್ವದಲ್ಲಿ, ಬಹು ಕಠಿಣವಾದ ಸೆರೆ ಮನೆಯ ಜೀವನವನ್ನು ನಡೆಸುವುದೆಂದು ತೀರ್ಮಾನವಾಗಿದ್ದಿತು. ಈ ಸೆರೆಮನೆಯ ಜೀವನದಲ್ಲಿ ಇರುವಾಗ ಮನುಷ್ಯರನ್ನು ನೋಡಲು, ಅವ ರೊಂದಿಗೆ ಮಾತನಾಡಲು, ದಿನ ಪತ್ರಿಕೆಯನ್ನು ಓದಲು ಸಹ ಸ್ವಾತಂತ್ರ್ಯ ವಿಲ್ಲದಂತೆ ಕರಾರಾಗಿದ್ದಿತು. ಅವರು ಓದುವುದಕ್ಕೆ ಸಾಕಷ್ಟು ಪುಸ್ತಕಗಳನ್ನು ಒದಗಿಸುವುದಾಗಿಯೂ, ವೀಣೆ ಮುಂತಾದುವನ್ನು ಕೊಡುವುದಾಗಿಯೂ ಜಹಗೀರುದಾರರು ಮಾತುಕೊಟ್ಟಿದ್ದರು. ಲಾಯರು ಹೊರಗಿನವರಿಗೆ ಕಾಗದವನ್ನು ಬರೆಯುಬಹುದಾಗಿತ್ತು. ಆದರೆ ಹೊರಗಿನವರಿಂದ ಕಾಗದ ವನ್ನು ತರಿಸಿಕೊಳ್ಳುವ ಹಾಗಿರಲಿಲ್ಲ. ಆಚೆಯ ಪ್ರಪಂಚವನ್ನು ನೋಡುವ ಅಧಿಕಾರವೂ ಇರಲಿಲ್ಲ. ಒಡೆಯನ ಅಪ್ಪಣೆಯನ್ನು ಪಡೆದು ಅದಕ್ಕಾಗಿಯೇ ಮಾಡಿದ್ದ ಕಿಂಡಿಯಿಂದ ಹೊರಗಿನ ಪ್ರಪಂಚವನ್ನು ನೋಡಬಹುದಾಗಿತ್ತು. ಅಂದು ಈ ಪ್ರತಿಯೊಂದು ವಿಷಯಗಳನ್ನೂ ಒಳಗೊಂಡಿರುವ ಕರಾರು ಪತ್ರ ವೊಂದನ್ನು ಬರೆಯಿಸಿದರು. ಅದರಂತೆ ೧೪ನೆಯ ನವೆಂಬರ್ ೧೮೭೦ ರಿಂದ ೧೫ನೆಯ ನವೆಂಬರ್ ೧೮೮೫ರ ವರೆವಿಗೂ ಲಾಯರು ಸೆರೆಮನೆಯಲ್ಲಿ ಇರ

ಬೇಕೆಂದು ತೀರ್ಮಾನವಾಯಿತು. ಈ ಕರಾರಿನಂತೆ ನಡೆದುಕೊಳ್ಳದೆ ಹೋದಲ್ಲಿಯಾಗಲೀ ಇಲ್ಲವೆ ಅವಧಿಗೆ ಮೊದಲೇ ಈಚೆಗೆ ಬಂದುಬಿಟ್ಟಲ್ಲಿಯಾಗಲೀ ಲಾಯರು ಜಹಗೀರುದಾರರಿಂದ ಹಣ ಪಡೆಯುವ ಹಕ್ಕನ್ನು ಕಳೆದುಕೊಂಡಂತೆ ಆಗುವುದೆಂದೂ ತೀರ್ಮಾನವಾಯಿತು.

ಲಾಯರಿಗೆ ಮೊದಲನೆಯ ವರುಷದ ಸೆರೆಮನೆಯ ವಾಸವು ಬಹು ಕಷ್ಟತರವಾಗಿಯೇ ಕಂಡಿರಬೇಕು. ಹಗಲೂ ರಾತ್ರಿ ವೀಣೆಯನ್ನು ನುಡಿಸುವುದರಲ್ಲಿಯೇ ಕಾಲ ಕಳೆಯುತ್ತಿದ್ದನು. ಅವನು ಕಾಫಿ ಕುಡಿಯುವುದನ್ನೂ ಸಹ ನಿಲ್ಲಿಸಿ ಬಿಟ್ಟನು. ಸಿಗರೇಟನ್ನೂ ದೂರೀಕರಿಸಿದನು. ಕಾರಣ ಕಾಫಿಯನ್ನು ಕುಡಿದರೆ ಅದು ಆಸೆಯನ್ನು ಉದ್ರೇಕಗೊಳ್ಳುವಂತೆ ಮಾಡುತ್ತದೆ. ಇಂತಹ ಆಸೆಗಳೇ ತನ್ನ ಈ ತಪಸ್ಸಿಗೆ ಶತ್ರುಗಳಾಗಿ ಪರಿಣಮಿಸದಿರವು. ಅಲ್ಲದೆ ಬರಿಯ ಕಾಫಿಯೊಂದನ್ನೇ ಕುಡಿಯುವುದು ತುಂಬಾ ಕಷ್ಟ? ತನ್ನ ಕೋಣೆಯ ಗಾಳಿಯು ಕೆಡುವುದೆಂಬ ಉದ್ದೇಶದಿಂದ ಸಿಗರೇಟನ್ನು ಸೇದುತ್ತಿರಲಿಲ್ಲ. ಜಹಗೀರುದಾರರು ಇವನಿಗೆ ಓದುವುದಕ್ಕೆ ಪತ್ತೇದಾರಿ ಕಾದಂಬರಿ, ಪ್ರೇಮ ಸಂಬಂಧವಾದ ಕಾದಂಬರಿಗಳು, ಉತ್ಸಾಹ ಆಸೆ ಮುಂತಾದುವನ್ನು ಹೆಚ್ಚಿಸುವಂತಹ ಕತೆಗಳ ಪುಸ್ತಕಗಳನ್ನು ಕೊಡುತ್ತಿದ್ದರು.

ಎರಡನೆಯ ವರುಷದಲ್ಲಿ ವೀಣೆಯ ನಾದವು ನಿಂತುಹೋಯಿತು. ಲಾಯರು ಪುಸ್ತಕಗಳನ್ನೇ ಓದಹತ್ತಿದರು. ಐದನೆಯ ವರುಷದಲ್ಲಿ ಮತ್ತೆ ಆಗಾಗ್ಗೆ ಸಂಗೀತವು ಪ್ರಾರಂಭವಾಯಿತು. ಆ ವರುಷ ಕಾಫಿ ಮುಂತಾದ ಪಾನೀಯಗಳಿಗೂ ಹೇಳಿ ಕಳುಹಿಸಿದನು. ಆ ವರುಷ ಅವನನ್ನು ನೋಡ ಬಂದವರು ಅವನು ಸದಾ ತಿನ್ನುವುದು, ಕುಳಿತಿರುವುದು ಮತ್ತು ಮಲಗಿರುವುದರಲ್ಲಿಯೇ ಕಾಲವೆಲ್ಲವನ್ನೂ ಕಳೆಯತೊಡಗಿದ್ದಾನೆಂದುಕೊಳ್ಳುತ್ತಿದ್ದರು. ಕೆಲವು ವೇಳೆ ದೊಡ್ಡದಾಗಿ ಆಕಳಿಸುತ್ತಾ, ಹುಚ್ಚು ಹುಚ್ಚಾಗಿ ತನ್ನಲ್ಲಿಯೇ ಗೊಣಗುಟ್ಟುತ್ತಿದ್ದನಂತೆ. ಬಹಳಕಾಲ ಬರೆಯುತ್ತಿದ್ದು ಅನಂತರ ಬರೆದುದೆಲ್ಲವನ್ನೂ ಹರಿದುಬಿಡುತ್ತಿದ್ದನಂತೆ. ಎಷ್ಟೋವೇಳೆ ಏತಕ್ಕೋ ಅಳುತ್ತಿದ್ದನಂತೆ.

ಆರನೆಯ ವರುಷದ ಕೊನೆಯ ಭಾಗದಲ್ಲಿ ಅನುಕ್ರಮವಾಗಿ ಚರಿತ್ರೆ, ಭಾಷಾಸಾಹಿತ್ಯ, ವೇದಾಂತ ಮೊದಲಾದುವುಗಳ ಅಭ್ಯಾಸಕ್ಕೆ ಪ್ರಾರಂಭಿಸಿ ಬಹು

ಉತ್ಸಾಹದಿಂದ ಕಲಿಯತೊಡಗಿದನು. ಜಹಗೀರುದಾರರಿಗೆ ಪುಸ್ತಕಗಳನ್ನು ಒದಗಿಸಿ ಕೊಡುವುದೇ ಕಷ್ಟವಾಗತೊಡಗಿತು. ನಾಲ್ಕು ವರುಷಗಳ ಅವಧಿಯಲ್ಲಿ ಆರುನೂರು ಪುಸ್ತಕಗಳನ್ನು ಅವನಿಗಾಗಿ ಕೊಂಡುತರಬೇಕಾಯಿತು. ಈ ಉತ್ಸಾಹ ಅತಿರೇಕವಾಗಿರುವಾಗಲೇ ಲಾಯರಿಂದ ಜಹಗೀರುದಾರರಿಗೆ ಈ ಕೆಳಗೆ ಕಂಡ ಕಾಗದ ಬಂದಿತು.

" ನನ್ನ ಸೆರೆಮನೆಯ ಒಡೆಯರೇ, ಈ ಕಾಗದವನ್ನು ಆರು ಭಾಷೆಗಳಲ್ಲಿ ಬರೆದಿರುತ್ತೇನೆ. ಭಾಷಾಪಂಡಿತರುಗಳಿಗೆ ಇವನ್ನು ತೋರಿಸಿ. ಅವರು ಇದನ್ನು ಓದಲಿ. ತಪ್ಪು ಒಂದೂ ಇಲ್ಲವೆಂದು ಹೇಳಿದರೆ ಆಗ ನೀವು ನನಗೆ ತಿಳಿಸುವದಕ್ಕಾಗಿ ಒಂದು ತುಪಾಕಿಯನ್ನು ಹಾರಿಸಿರಿ. ಆ ಶಬ್ದವನ್ನು ಕೇಳಿ ನನ್ನ ಈ ಆರು ವರುಷದ ಕಷ್ಟತರ ಪ್ರಯತ್ನಗಳು ನಷ್ಟವಾಗಿಲ್ಲವೆಂದು ತಿಳಿಯುತ್ತೇನೆ. ಬೇರೆ ಬೇರೆ ದೇಶದ ಮಹಾಪುರುಷರುಗಳು, ವಿಭೂತಿಗಳು ಬೇರೆ ಬೇರೆ ಭಾಷೆಗಳಲ್ಲಿ ಮಾತನಾಡುವರು. ಆದರೇನು ? ಎಲ್ಲರಲ್ಲಿಯೂ ಎಲ್ಲದರಲ್ಲಿಯೂ ಒಂದೇ ಆದ ದಿವ್ಯ ಆತ್ಮಜ್ಯೋತಿಯೊಂದು ಉರಿಯುತ್ತಿರುತ್ತದೆ. ಅವರ ಭಾಷೆಯನ್ನೆಲ್ಲಾ ಕಲಿತು ಅವರನ್ನು ಅರ್ಥಮಾಡಿಕೊಳ್ಳುವಷ್ಟು ಶಕ್ತಿ ನನಗೆ ಬಂದಿದೆಯಲ್ಲಾ ಎಂದು ನನಗಾಗಿರುವ ಆನಂದವೆಷ್ಟೆಂಬುದನ್ನು ಬಲ್ಲಿರಾ ? "

ಸೆರೆಯಾಳಿನ ಅಭಿಲಾಷೆಯಂತೆ ಹೂದೋಟದಲ್ಲಿ ಎರಡು ತುಪಾಕಿಗಳನ್ನು ಹಾರಿಸಿದರು.

* * * * *

ಹೀಗೆ ಹತ್ತು ವರುಷಗಳು ಕಳೆದು ಹೋದವು. ಈಗ ಸೆರೆಯಾಳು ಭಗವದ್ಗೀತೆಯನ್ನು ಓದುವುದರಲ್ಲಿಯೇ ಕಾಲವನ್ನೆಲ್ಲಾ ಕಳೆಯ ತೊಡಗಿದ. ಆರು ಭಾಷೆಗಳಲ್ಲಿ ಪಂಡಿತನಾಗಿ ಹೆಚ್ಚು ಗ್ರಂಥಗಳನ್ನೂ ಓದುತ್ತಿದ್ದ. ಆ ಮನುಷ್ಯನು ಈಗ ಭಗವದ್ಗೀತೆಯೊಂದನ್ನೇ ಓದುವುದರಲ್ಲಿ ಕಾಲಕಳೆಯುತ್ತಿದ್ದುದು ಆಶ್ಚರ್ಯವಲ್ಲವೆ? ಕೊನೆಯ ಎರಡು ವರುಷಗಳಲ್ಲಿ ತನ್ನ ಹುಚ್ಚೇರಿದ ಹಾಗೆ ಹೆಚ್ಚುಹೆಚ್ಚಾಗಿ ಓದುತ್ತಿದ್ದ. ಕೆಲವು ವೇಳೆ ವಿಜ್ಞಾನದ ಗ್ರಂಥಗಳನ್ನೂ, ಮತ್ತೆ ಕೆಲವು ವೇಳೆ ಷೇಕ್ಸ್‌ಪಿಯರ್, ಬೈರನ್ ಮುಂತಾದ

ಆಂಗ್ಲ ಕವಿಗಳ ಕೃತಿಗಳನ್ನೂ, ವ್ಯಾಸ, ವಾಲ್ಮೀಕಿ, ಕಾಳಿದಾಸಾದಿ ಭಾರತೀಯ ಕವಿಗಳ ಕೃತಿಗಳನ್ನೂ ಓದುತ್ತಿದ್ದನು. ಒಂದೊಂದು ವೇಳೆ ರಸಾಯನ ಶಾಸ್ತ್ರದ ಪುಸ್ತಕಗಳನ್ನು ಕಳುಹಿಸಿಕೊಡಬೇಕೆಂದು ಜಹಗೀರುದಾರರಿಗೆ ಪತ್ರ ಬರೆಯುತ್ತಿದ್ದನು.

ಇದೆಲ್ಲವನ್ನು ಜಹಗೀರುದಾರರು ಮನಸ್ಸಿಗೆ ತಂದುಕೊಂಡು ಯೋಚಿಸ ತೊಡಗಿದರು.

"ನಾಳೆ ಹನ್ನೆರಡು ಘಂಟೆಯ ಹೊತ್ತಿಗೆ ಆತನು ಬಿಡುಗಡೆ ಹೊಂದು ತ್ತಾನೆ. ಕರಾರಿನ ಪ್ರಕಾರ ನಾನು ಆತನಿಗೆ ಎರಡು ಲಕ್ಷ ರೂಪಾಯಿ ಗಳನ್ನು ಕೊಡಬೇಕು. ಸರಿ, ನಾನು ನಾಳೆ ಭಿಕಾರಿಯಾಗುವೆನು. ನನ್ನ ಸರ್ವನಾಶವಾಯಿತು............"

ಜಹಗೀರುದಾರರು ಎರಡು ವರುಷಗಳ ಕೆಳಗೆ ಲಕ್ಷಗಟ್ಟಲೆ ಹಣ ವುಳ್ಳವರಾಗಿದ್ದರು. ಈಗಲಾದರೋ ಅವರ ಸ್ಥಿತಿಯನ್ನು ಹೇಳತೀರದು. ಅವರಿಗೆ ಹಣವಿರುವುದು ಹೆಚ್ಚೋ ಇಲ್ಲವೆ ಸಾಲವಿರುವುದು ಹೆಚ್ಚೋ ಎಂದು ತಿಳಿಯುವುದೇ ಕಷ್ಟವಾಗಿದೆ.

"ಅಯ್ಯೋ, ಸಾಲವೆ......." ಎಂದು ನಿಟ್ಟುಸಿರುಬಿಡುತ್ತಾ ನಿರುತ್ಸಾಹಿ ಗಳಾಗಿ ಕೈ ಮೇಲೆ ತಲೆಯನ್ನಿಟ್ಟುಕೊಂಡು ಚಿಂತಿಸತೊಡಗಿದರು.

"ಅಯ್ಯೊ, ಆ ಹಾಳು ಮನುಷ್ಯನು ಸಾಯಬಾರದೇಕೆ? ಆತನಿಗಿನ್ನೂ ನಾಲ್ವತ್ತು ವರುಷಗಳು ಮಾತ್ರ. ನಾಳೆ ನನ್ನ ಹಣವೆಲ್ಲವನ್ನೂ ಪಡೆದು ಮುಂದೆ ಸುಖಜೀವನವನ್ನು ನಡೆಸುತ್ತಾನೆ. ನಾನಾದರೋ ಭಿಕಾರಿಯಂತೆ ಬೀದಿ ಯಲ್ಲಿ ಅಲೆಯಬೇಕಾಗುತ್ತದೆ. 'ನನಗೆ ಇಷ್ಟು ಸಿರಿಯನ್ನು ತುಂಬಿಕೊಟ್ಟುದ ಕ್ಕಾಗಿ ತುಂಬ ವಂದನೆಗಳು. ಇನ್ನು ಈಗ ನಿನಗೆ ಸಹಾಯಮಾಡಲೇ?' ಎಂದು ಆತನು ನನ್ನನ್ನು ಕೇಳುವಂತಹ ಸ್ಥಿತಿಯು ಬರುತ್ತದೆ. ಆಗದು, ಅದೆಂದಿಗೂ ಆಗದು. ಇಷ್ಟೆಲ್ಲವನ್ನೂ ತಪ್ಪಿಸಿಕೊಳ್ಳುವುದಕ್ಕೆ ಒಂದೇ ಉಪಾಯ ........ಆ ಮನುಷ್ಯನನ್ನು ಇಹಲೋಕದಿಂದ ಪಾರುಗಾಣಿಸಬೇಕು.

ಆಗತಾನೆ ಗಡಿಯಾರ ಮೂರುಬಡಿಯಿತು. ಜಹಗೀರುದಾರರು ಆಲಿಸಿದರು. ಮನೆಯಲ್ಲಿ ಎಲ್ಲರೂ ಮಲಗಿದಾರೆ. ನೀರವತೆಯು ಎಲ್ಲೆಲ್ಲಿಯೂ

ನೆಲೆಸಿದೆ. ತಂಗಾಳಿ ಸುಯ್ಯೆಂದು ಶಬ್ದ ಮಾಡುತ್ತಾ ಕಿಟಕಿಯಿಂದ ತೂರಿ ಬರು ತ್ತಿದೆ. ಜಹಗೀರುದಾರರು ಸದ್ದುಮಾಡದೆ ಸೆರೆಮನೆಯ ಬೀಗಪಕ್ಕೆಯನ್ನು ಕಬ್ಬಿಣದ ಪೆಟ್ಟಿಗೆಯಿಂದ ಈಚೆಗೆ ತೆಗೆದು, ಮೇಲು ಹೊದಿಕೆಯನ್ನು ಹೊದ್ದು, ಮನೆಯಿಂದ ಹೊರಬಿದ್ದು, ಹೂದೋಟದ ಬಳಿ ಬಂದರು. ಎಲ್ಲೆಡೆಯೂ ಗಾಡಾಂಧಕಾರ, ಮಳೆಯ ತುಂತುರುಹನಿಗಳು ಬೀಳುತ್ತಿದ್ದವು. ಹೆಚ್ಚು ಕತ್ತಲೆ ಇದ್ದು ಕಣ್ಣರಳಿಸಿ ನೋಡಿದರೂ ಮುಂದೆ ಏನೂ ಕಾಣ ದಾಗಿದ್ದಿತು. ಹೂದೋಟವನ್ನು ಹೊಕ್ಕ. ಮಳೆಯು ಬರುತ್ತಿದ್ದುದರಿಂದ ಜವಾನನು ಒಂದೆಡೆ ಹೋಗಿ ಮಲಗಿಬಿಟ್ಟಿದ್ದನೆಂದು ಕಾಣುತ್ತದೆ.

"ಈಗ ನನ್ನ ಕೆಲಸವನ್ನು ಮಾಡಿಬಿಟ್ಟರೆ ಒಂದು ತೊಂದರೆ ತಪ್ಪುತ್ತದೆ. ಜವಾನನು ಇಲ್ಲದೆ ಇರುವುದರಿಂದ ಆ ಕೆಲಸಕ್ಕೆ ಅವನೇ ಕಾರಣನೆಂದು ಸುಳ್ಳುಸುದ್ದಿಯನ್ನು ಹಬ್ಬಿಸಬಹುದು.

ಕತ್ತಲೆಯಲ್ಲಿಯೇ ತೋಟದ ಎಡಬದಿಯ ಹಾದಿಯಲ್ಲಿ ನಡೆದು ಒಂದು ಕಡ್ಡಿಯನ್ನು ಹೊತ್ತಿಸಿ ಸುತ್ತಲೂ ನೋಡಿದರು. ಒಬ್ಬನ ಸುಳಿವೂ ಅಲ್ಲಿ ಕಾಣಲಿಲ್ಲ. ಸೆರೆಮನೆಯ ಕೋಣೆಯಲ್ಲಿ ಮಾತ್ರ ಒಂದು ಹಾಸಿಗೆ ಹಾಸಿದ ಹಾಗೆಯೇ ಬಿದ್ದಿದ್ದಿತು. ಅದರ ಮೇಲೆ ಹೊದ್ದಿಕೆ ಬಟ್ಟೆಗಳಿರಲಿಲ್ಲ. ಒಂದು ಮೂಲೆಯಲ್ಲಿ ಅಗ್ಗಿಷ್ಟಿಕೆಯಿದ್ದಿತು. ಸೆರೆಮನೆಯ ಒಳಗೆ ಹೋಗುವ ಬಾಗಿಲು ಅಗಣಿ ಹಾಕಿ ಮೊಹರು ಮಾಡಲ್ಪಟ್ಟಿದ್ದಿತು.

ಬೆಂಕಿಕಡ್ಡಿಯು ಆರಿಹೋಯಿತು. ಏಕೋ ಜಹಗೀರುದಾರರಿಗೆ ಒಂದು ತರಹ ಭಯವಾಯಿತು. ಕೋಣೆಯ ಕಿಟಕಿಯಿಂದ ಒಳಗಡೆ ಬಗ್ಗಿ ನೋಡಿದರು. ಸೆರೆಯಾಳಿನ ಕೋಣೆಯಲ್ಲಿ ಒಂದು ಮೇಣದ ಬತ್ತಿಯ ದೀಪವು ಉರಿಯುತ್ತಿದ್ದಿತು. ಸೆರೆಯಾಳು ಮೇಜಿನ ಮುಂದಿನ ಕುರ್ಚಿಯೊರಗಿ ಕುಳಿತಿದ್ದನು. ಆತನ ಹಿಂಭಾಗದ ತಲೆಯ ಕೂದಲು ಮತ್ತು ಕೈಗಳು ಮಾತ್ರ ಜಹಗೀರುದಾರರಿಗೆ ಚೆನ್ನಾಗಿ ಕಾಣುತ್ತಿದ್ದವು. ತೆರೆದ ಪುಸ್ತಕಗಳು ಕೆಲವು, ಮೇಜಿನ ಮೇಲೆಯೂ ನೆಲದ ಮೇಲೆ ಹಾಸಿದ್ದ ಚಾಪೆಯ ಮೇಲೆಯೂ ಬಿದ್ದಿದ್ದವು.

ಐದಾರು ನಿಮಿಷಗಳು ಕಳೆದವು. ಸೆರೆಯಾಳು ಅಲುಗದೇ ಯೋಗ ನಿಷ್ಠೆಯಲ್ಲಿ ಕುಳಿತಿರುವ ಕರ್ಮಠನಂತೆ ಕುಳಿತಿದ್ದನು. ಹದಿನೈದು

ವರುಷಗಳ ಸೆರಮನೆಯ ವಾಸವು ಅವನಿಗೆ ಹಾಗೆ ಸಮಾಧಿ ಸ್ಥಿತಿಗೆ ಏರಲು ಶಕ್ತಿ ಕೊಟ್ಟಿದ್ದಿತು.

ಜಹಗೀರುದಾರರು ಕಿಟಿಕಿಯ ಬಾಗಿಲನ್ನು ಬಡಿದು ಶಬ್ದಮಾಡಿ ಎಚ್ಚರಿಸಲು ಮಾಡಿದ ಪ್ರಯತ್ನ ನಿಷ್ಫಲವಾಯಿತು. ಅವರು ಮೆಲ್ಲ ಮೆಲ್ಲನೆ ಬಾಗಿಲ ಬಳಿ ಬಂದು ಬೀಗದ ಮೊಹರನ್ನು ಒಡೆದು ಬೀಗ ತೆಗೆಯಲು ಪ್ರಯತ್ನಪಟ್ಟರು. ಹದಿನೈದು ವರುಷಗಳಿಂದ ತೆಗೆಯದೆಯೇ ಇದ್ದುದರಿಂದ ಅದು ಒಂದು ತರಹದ ಶಬ್ದ ಮಾಡಿಕೊಂಡು ತೆರೆದುಕೊಂಡಿತು. ಆ ಶಬ್ದವನ್ನು ಕೇಳಿ ಸೆರೆಯಾಳು ಕಿಟ್ಟನೆ ಕಿರಿಚಿಕೊಳ್ಳುವನೆಂದು ಬಗೆದಿದ್ದರು. ಮೂರುನಾಲ್ಕು ನಿಮಿಷಗಳು ಕಳೆದವು. ವಾತಾವರಣವು ಮೊದಲಿನಂತೆಯೇ ನಿಶಬ್ದವಾಗಿದ್ದಿತು. ಇವರು ಒಳನುಗ್ಗಿ ನೋಡಲು ಮನಸ್ಸು ಮಾಡಿದರು.

ಮೇಜಿನ ಮುಂದೆ ಕುಳಿತಿದ್ದ ವ್ಯಕ್ತಿಯು ಮನುಷ್ಯನಂತೆಯೇ ಕಾಣಲಿಲ್ಲ. ಹೆಂಗಸಿನ ನೀಳವಾದ ಕೇಶರಾಶಿಯಂತೆ ತಲೆಗೂದಲನ್ನು ಹೊಂದಿ, ಹೆಚ್ಚು ಬೆಳೆದ ಗಡ್ಡವುಳ್ಳ ಅಸ್ತಿಪಂಜರವಾಗಿದ್ದಿತು. ಹಳದಿ ಬಣ್ಣವೇರಿದ ಮುಖ, ಗುಣಿಬಿದ್ದ ಕೆನ್ನೆಗಳು, ಆ ತಲೆಯನ್ನು ಹೊತ್ತಿರುವ ಸಣ್ಣವಾಗಿರುವ ಕೈಗಳು. ಒಟ್ಟಿನಲ್ಲಿ ಆತನ ರೂಪು ನೋಡುವುದಕ್ಕೆ ಭಯಾನಕವಾಗಿದ್ದಿತು. ನರೆಗೂದಲುಗಳಾಗಲೇ ತಲೆಯಲ್ಲಿ ತುಂಬಿದ್ದವು. ಆಗ ಆತನನ್ನು ನೋಡಿದವರಾರೂ ಇನ್ನೂ ಅವನಿಗೆ ನಲವತ್ತು ವರುಷಗಳೆಂದು ಹೇಳುವಂತಿರಲಿಲ್ಲ. ಮೇಜಿನ ಒಂದೆಡೆಯಲ್ಲಿ ಬಹು ಸಣ್ಣ ಅಕ್ಷರಗಳಲ್ಲಿ ಬರೆದ ಒಂದು ಕಾಗದವಿದ್ದಿತು.

"ಅಯ್ಯೋ ಹುಚ್ಚು ಮನುಷ್ಯನೇ!! ನಿದ್ರಿಸುತ್ತಾ ನಿದ್ರಿಸುತ್ತಾ ತನ್ನ ಕನಸಿನಲ್ಲಿ ಲಕ್ಷ ಲಕ್ಷ ರೂಪಾಯಿಗಳನ್ನು ಕಾಣುತ್ತಿರುವನೇನೋ ಸತ್ತ ಹೆಣದಂತೆ ಇರುವ ಈ ಮನುಷ್ಯನನ್ನು ಎತ್ತಿ ಹಾಸಿಗೆಯ ಮೇಲೆ ಮಲಗಿಸಿ ಉಸಿರುಕಟ್ಟುವಂತೆ ಮಾಡಿ ಸಾಯುವಂತೆ ಮಾಡಿಬಿಡಬೇಕು. ಇರಲಿ, ಮೊದಲು ಅವನು ಏನನ್ನು ಬರೆದಿಟ್ಟಿರುವನೋ ಓದಿ ನೋಡೋಣ." ಎನ್ನುತ್ತಾ ಆ ಕಾಗದವನ್ನು ತೆಗೆದುಕೊಂಡು ಓದಿಕೊಂಡ. ಆ ಕಾಗದವು ಈ ರೀತಿಯಾಗಿದ್ದಿತು.

"ನಾಳೆ ಹನ್ನೆರಡು ಘಂಟೆಯ ಸರಿರಾತ್ರಿಗೆ ನನ್ನ ಬಿಡುಗಡೆಯಾಗಿ ನನ್ನ ಜನರೊಡನೆ ಸೇರಲು ಅಧಿಕಾರ ಪಡೆಯುತ್ತೇನೆ. ಈ ಕೋಣೆಯನ್ನು ಬಿಟ್ಟು ಹೊರಹೊರಟು ಸೂರ್ಯದೇವನನ್ನು ಕಣ್ಣುತುಂಬಾ ನೋಡುವುದಕ್ಕೆ ಮೊದಲು ನಿಮಗೆ ಒಂದೆರಡು ಮಾತುಗಳನ್ನು ತಿಳಿಸುವುದು ಉಚಿತವೆಂದು ತೋರುತ್ತದೆ. ನನ್ನ ಬಿಡುಗಡೆ, ಮುಂದಿನ ಆ ಜೀವನ, ಎರಡು ಲಕ್ಷ ರೂಪಾಯಿಗಳ ಸಾಹುಕಾರತನ ಮುಂತಾದುವೆಲ್ಲವನ್ನು ತಿರುಳಿಲ್ಲದ ವಸ್ತು ವೆಂದು ತಿಳಿದು ದೇವರೆದುರಿಗೆ ಆತ್ಮಸಾಕ್ಷಿಯಾಗಿ ತ್ಯಜಿಸಿರುವೆನೆಂದು ಈ ಮೂಲಕ ತಿಳಿಸಲಿಚ್ಛಿಸುತ್ತೇನೆ.

ನಾನು ಪ್ರಪಂಚದ ಸ್ಥಿತಿಗತಿಗಳನ್ನು ಜನಗಳೊಂದಿಗೆ ವ್ಯವಹರಿಸಿ ತಿಳಿದಿಲ್ಲ ವೆಂಬುದೇನೋ ನಿಜ. ಈ ಹದಿನೈದು ವರುಷಗಳ ಏಕಾಗ್ರತೆಯ ಅಭ್ಯಾಸ ದಿಂದ ಪ್ರಾಪಂಚಿಕ ಜೀವನವನ್ನು ಪುಸ್ತಕಗಳಿಂದ ಪರಿಶೀಲಿಸಿ ತಿಳಿದು ಕೊಂಡಿದೇನೆ. ಹಿಮಾಲಯದ ಗೌರೀಶಂಕರ ಮುಂತಾದ ಗಿರಿಶಿಖರಗಳನ್ನೂ ಮುಟ್ಟಿದೇನೆ. ಮುನ್ನೇಸರು, ಎಳೆನೇಸರು, ಮುದಿನೇಸರುಗಳ ದರ್ಶನ ದಿಂದ ಆನಂದವನ್ನು ಪಟ್ಟಿದೇನೆ. ಸಮುದ್ರದ ಉಬ್ಬರವಿಳಿತಗಳನ್ನು ಕಣ್ಣಾರೆ ಕಂಡು ಆನಂದಪಟ್ಟಿದೇನೆ. ಹಕ್ಕಿಯಂತೆ ಗಗನಕ್ಕೇರಿ ಮೋಡಗಳ ಮೇಲೆ ತೇಲಿ, ದೇವತೆಗಳೊಂದಿಗೆ ಆಟವಾಡಿದೇನೆ.

ಅವು ನನಗೆ ಹೊಸ ಚೇತನವನ್ನೂ, ಬುದ್ಧಿಯನ್ನೂ ಕೊಟ್ಟಿವೆ. ಸಾವಿರಾರು ವರುಷಗಳ ಜನರ ಸಂಸ್ಕೃತಿಯು ಯಾವುದನ್ನು ಕೂಡಿಟ್ಟಿದೆಯೋ ಅವೆಲ್ಲವೂ ಘನೀಭೂತವಾಗಿ ನನ್ನ ತಲೆಯಲ್ಲಿ ಅಡಗಿದೆಯೆಂದುಬೇಕಾದರೂ ಹೇಳಬಹುದು. ನಿಮ್ಮೆಲ್ಲರಿಗಿಂತಲೂ ಬುದ್ಧಿವಂತನಾಗಿರುವೆನೆಂದು ಖಂಡಿತ ವಾಗಿ ಹೇಳಬಲ್ಲೆ. ಈಗ ನನಗೆ ನಿನ್ನ ಆ ಪುಸ್ತಕಗಳು ಬೇಡವಾಗಿವೆ. ಆ ಬುದ್ಧಿಶಕ್ತಿಯೂ ಬೇಕಿಲ್ಲ. ಎಲ್ಲವೂ ಬರಿಯ ಮಾಯೆ; ಬರಿಯ ಸುಳ್ಳಿನ ಕಂತೆ. ನೀನು ವಿಶೇಷ ಬುದ್ಧಿವಂತನಾಗಿರು, ಜಂಬಗಾರನಾಗಿರು, ಸಾವು ನಿನ್ನನ್ನು ಒಂದಿಲ್ಲೊಂದು ದಿನ ಹೊಡೆದು ಮುಕ್ಕುವುದು. ಆ ಹೆಮ್ಮೆ, ಒಣಜಂಬ ಮತ್ತು ಬುದ್ಧಿವಂತಿಕೆಯ ಜೋರು ಎಲ್ಲವೂ ಏಕೆ ಬೇಕು?

ನೀನೊಬ್ಬ ಹುಚ್ಚ. ಸರಿಯಾದ ದಾರಿ ಬಿಟ್ಟು ಅಡ್ಡದಾರಿ ಹಿಡಿದಿ ರುವೆ. ಸುಳ್ಳೆಲ್ಲವನ್ನೂ ನಿಜವೆಂದೂ, ನೋಡಲಾಗದುದನ್ನು ಸುಂದರ

ವಾಗಿದೆಯೆಂದೂ ನಂಬಿರುವೆ. ನೀರಮೇಲಣ ಗುಳ್ಳೆಯಂತಿರುವ ಈ ಎರಡು ದಿನದ ಬಾಳನ್ನು ನಂಬಿರುವ ನಿನ್ನನ್ನು ನೋಡಿ ನಾನು ಆಶ್ಚರ್ಯಪಡುವೆನು.

ಈಗ ನಿನಗೆ ನಾನು ಹೇಳಿದುದೆಲ್ಲವೂ ನಿಜವೆಂದು ತೋರಿಸುವುದಕ್ಕಾಗಿ ಈಗ ನನಗೆ ಸೇರಬೇಕಾದ ಎರಡು ಲಕ್ಷ ರೂಪಾಯನ್ನು ತ್ಯಾಗಮಾಡಿದೇನೆ. ಮೊದಲು ಆ ಎರಡು ಲಕ್ಷ ರೂಪಾಯಿಗಳೇ ಸರ್ವಸ್ವವೆಂದು ನಂಬಿದ್ದೆ. ಈಗ ಅದು ಮಣ್ಣಿಗೆ ಸಮಾನವೆಂದು ಅರಿತಿರುವೆನು. ಎರಡು ಲಕ್ಷ ರೂಪಾಯಿಗಳ ಮೇಲೆ ನನಗಿರುವ ಅಧಿಕಾರವನ್ನು ಬಿಟ್ಟಿದೇನೆ. ಬೇಕೆಂತಲೇ ವಾಯಿದೆಗೆ ಐದು ನಿಮಿಷಗಳ ಮೊದಲು ಸೆರೆಮನೆಯಿಂದ ಹೊರಬಿದ್ದು ನಿನ್ನ ಕಾಯಿದೆಯನ್ನು ಮೀರಿ ನಡೆಯುತ್ತೇನೆ”

ಇಷ್ಟೆಲ್ಲವನ್ನೂ ಓದಿದ ಜಹಗೀರುದಾರರ ಮನಸ್ಸು ಸಂಪೂರ್ಣ ವ್ಯತ್ಯಾಸ ಹೊಂದಿತು. ಆತನನ್ನು ಆಲಂಗಿಸಿ ಅಳತೊಡಗಿದರು. ಅನಂತರ ಸೆರೆಮನೆಯನ್ನೂ ಬಿಟ್ಟು ಹೊರಗೆ ಹೊರಟು ಬಂದರು. ಅವರ ಬದುಕು ಅವರಿಗೇ ದುರ್ಭರವಾಯಿತು. ಎಂದೂ ಅವರ ಮನಸ್ಸಿಗೆ ಇಷ್ಟು ಜಿಗುಪ್ಸೆಯಾಗಿರಲಿಲ್ಲ. ಮನೆಯನ್ನು ಸೇರಿದ ಕೂಡಲೇ ಹಾಸಿಗೆಯ ಮೇಲೆ ಬಿದ್ದು ಬಿಕ್ಕಿ ಬಿಕ್ಕಿ ಅಳತೊಡಗಿದರು. ಎಷ್ಟೇ ಪ್ರಯತ್ನಪಟ್ಟರೂ ನಿದ್ರೆ ಬರಲೇ ಇಲ್ಲ.

* * * * *

ಬೆಳಗಾದ ಕೂಡಲೇ ಸೆರೆಮನೆಯ ಜವಾನನು ಹೆದರುತ್ತಾ ಜಹಗೀರುದಾರರಲ್ಲಿಗೆ ಬಂದು ಸೆರೆಯಾಳು ಸೆರೆಮನೆಯ ಗೋಡೆಯನ್ನು ಹತ್ತಿ ಓಡಿ ಹೋಗಿರುವನೆಂದು ತಿಳುಹಿದನು. ಜಹಗೀರುದಾರರು ಆ ಮಾತಿನತ್ತ ಗಮನವೇ ಕೊಡಲಿಲ್ಲ. ಎದ್ದವರೇ ಸೆರೆಮನೆಯನ್ನು ಹೊಕ್ಕು ಸೆರೆಯಾಳಿನ ಕಾಗದವನ್ನು ತೆಗೆದು ಭದ್ರವಾಗಿ ತನ್ನ ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿದರು.

# ಕಣ್ಮರೆಯ ಹುಣ್ಣು

ಒಂದು ದಿನ ಮುಂಜಾನೆ ಒಬ್ಬ ಪ್ರಸಿದ್ಧನಾದ ಶಸ್ತ್ರ ಚಿಕಿತ್ಸಕನೆಡೆಗೆ ಒಬ್ಬ ರೋಗಿಯು ಬಂದನು. ವೈದ್ಯನು ಹಾಸಿಗೆಯಿಂದ ಇನ್ನೂ ಎದ್ದಿರಲಿಲ್ಲ. ರೋಗಿ ತನ್ನ ವಿಚಾರಕ್ಕೆ ಕೂಡಲೆ ಗಮನಕೊಡಬೇಕೆಂದು ಕಾಡಿ ಬೇಡಿದ ಮೇಲೆ, ವೈದ್ಯನು ಎದ್ದು ಬಟ್ಟೆಯನ್ನು ಧರಿಸಿ ಜವಾನನನ್ನು ಕರೆದು "ರೋಗಿಯನ್ನು ಒಳಗೆ ಕಳುಹಿಸು" ಎಂದು ಆಜ್ಞೆ ಮಾಡಿದನು.

ಒಳಗೆ ಬಂದ ಮನುಷ್ಯನು ಉತ್ತಮ ದರ್ಜೆಯ ಸಮಾಜಕ್ಕೆ ಸೇರಿದವ ನಂತಿದ್ದನು. ಅವನ ಬಿಳಿಚಿಕೊಂಡಿರುವ ಮುಖವನ್ನೂ ಮತ್ತು ನಿಶ್ಶಕ್ತಿ ಯನ್ನೂ ನೋಡಿದರೆ ಯಾವದೋ ದೈಹಿಕ ರೋಗದಿಂದ ನರಳುತ್ತಿರುವಂತೆ ತೋರುತಿತ್ತು. ಅವನ ಬಲಗೈ ಸ್ವಲ್ಪ ಬಾಗಿದ್ದಿತು. ನೋವನ್ನು ತಡೆದು ಕೊಳ್ಳ ಬಲ್ಲವನಾದರೂ ಸಂಕಟವನ್ನು ತಡೆಯಲಾರದೆ ಆಗಾಗ ಕೂಗಿ ಕೊಳ್ಳುತ್ತಿದ್ದನು.

"ದಯವಿಟ್ಟು ಕುಳಿತುಕೊಳ್ಳಿ. ನನ್ನಿಂದ ತಮಗೇನಾಗಬೇಕು?"

"ನನಗೆ ಒಂದು ವಾರದಿಂದ ನಿದ್ರೆ ಮಾಡಲಾಗದಂತಿದೆ. ನನ್ನ ಬಲ ಗೈಯಲ್ಲಿ ಏನೋ ಆಗಿದೆ. ಅದು ಏನೆಂದು ನನಗೇ ತಿಳಿಯದಾಗಿದೆ. ಅದು Cancer ಇರಬಹುದು, ಇಲ್ಲವೇ ಯಾವುದೊ ಭಯಂಕರವಾದ ವ್ಯಾಧಿ ಯಿರಬಹುದು. ಆದರಿಂದ ಮೊದಲು ಅಷ್ಟು ತೊಂದರೆ ಇರಲಿಲ್ಲವಾದರೂ ಈಗ ಉರಿಯಲಿಕ್ಕೆ ಹತ್ತಿದೆ. ಒಂದು ನಿಮಿಷ ಕಾಲವಾದರೂ ವಿಶ್ರಾಂತಿ ಇಲ್ಲವಾಗಿದೆ. ವಿಪರೀತವಾಗಿ ನೋವಾಗುತ್ತಲಿದೆ. ಗಂಟೆ ಗಂಟೆಗೂ ನೋವು ಏರುತ್ತಾ ಭಯೋತ್ಪಾದಕವಾಗಿ ತಡೆಯಲಾರದಾಗಿದೆ. ಆದ್ದರಿಂದ ತಮ್ಮನ್ನು ಈ ಬಗ್ಗೆ ವಿಚಾರಿಸಲು ಬಂದೆ. ಇನ್ನೊಂದು ಗಂಟೆ ಕಾಲ ಅದನ್ನು ಹಾಗೆಯೇ ಬಿಟ್ಟದ್ದೇ ಆದರೆ ನನಗೆ ಹುಚ್ಚು ಹಿಡಿಯುವುದು ಖಂಡಿತ. ನೀವು ಆ ಭಾಗವನ್ನು ಸುಟ್ಟುಬಿಡಬೇಕು. ಇಲ್ಲದಿದ್ದಲ್ಲಿ ಶಸ್ತ್ರ ಚಿಕಿತ್ಸೆ ಮಾಡಬೇಕು ಅಥವಾ ತಾವು ಏನಾದರೂ ಮಾಡಲೇ ಬೇಕು."

ವೈದ್ಯನು ಶಸ್ತ್ರ ಚಿಕಿತ್ಸೆ ಮಾಡಬೇಕಾದ ಪ್ರಮೇಯವೇನಿಲ್ಲವೆಂದು ಹೇಳಿ ಎಷ್ಟು ಸಮಾಧಾನ ಮಾಡಿದರೂ ರೋಗಿಯು

"ಇಲ್ಲ ಇಲ್ಲ, ನೀವು ಶಸ್ತ್ರ ಚಿಕಿತ್ಸೆ ಮಾಡಲೇ ಬೇಕು. ನಾನು ಆ ಭಾಗವನ್ನು ಕೂಡಲೇ ತೆಗೆಸಬೇಕೆಂಬ ಉದ್ದೇಶದಿಂದಲೇ ಬಂದಿದೇನೆ. ಇನ್ನೇತರಿಂದಲೂ ಪ್ರಯೋಜನವಾಗಲಾರದು," ಎಂದು ತನ್ನ ಕೈಯನ್ನು ಬಹು ಕಷ್ಟದಿಂದ ಎತ್ತಿ ಮುಂದೆ ಚಾಚಿ, "ನನ್ನ ಕೈಮೇಲೆ ಯಾವ ಗಾಯವೂ ಕಾಣದಿರುವುದಕ್ಕೆ ಆಶ್ಚರ್ಯ ಪಡಬೇಕಾದುದಿಲ್ಲ. ಇದು ನವೀನ ವ್ಯಾಧಿಯಾಗಿದೆ."

ವೈದ್ಯನು ಯಾವ ಹೊಸ ವಿಚಾರಕ್ಕೂ ತಾನು ಹೆದರುವುದಿಲ್ಲವೆಂದು ತಿಳಿಸಿದನು. ಆದರೂ ಅದನ್ನು ಪರೀಕ್ಷಿಸಿದ ಮೇಲೆ, ಅಲ್ಲಿ ಯಾವ ಅನುಮಾನವೂ ಬಾರದಿದ್ದುದಕ್ಕಾಗಿ ಭ್ರಾಂತನಾದನು. ಅದು ಇತರ ಕೈಗಳಂತೆಯೇ ಇದ್ದಿತು. ಅಲ್ಲದೆ ಬಣ್ಣವು ಸಹ ಬದಲಾಯಿಸಿರಲಿಲ್ಲ. ಆದರೆ ಆ ಮನುಷ್ಯನು ಕಠಿಣವಾದ ನೋವನ್ನು ಅನುಭವಿಸುತ್ತಿರುವನೆಂಬುದು ನಿಸ್ಸಂಶಯವಾಗಿತ್ತು. ವೈದ್ಯನು ಆತನ ಕೈಯನ್ನು ಬಿಟ್ಟಾಗ ಎಡಗೈಯಿಂದ ಅದನ್ನು ಹಿಡಿದುಕೊಂಡ ರೀತಿಯನ್ನು ನೋಡಿದರೆ ಇದು ತಿಳಿದುಬರುತಿತ್ತು.

"ಎಲ್ಲಿ ಘಾಯ?"

ಆತನು ತನ್ನ ಕೈ ಮೇಲೆ ಎರಡು ನರಗಳ ಮಧ್ಯ ಒಂದು ಗುಂಡಾದ ಜಾಗವನ್ನು ಗುರುತಿಸಿದನು. ವೈದ್ಯನು ಅಲ್ಲಿ ಬೆರಳ ಕೊನೆಯಿಂದ ಮುಟ್ಟಿದ ಕೂಡಲೇ ರೋಗಿಯು ಕೈಯನ್ನು ಹಿಂದಕ್ಕೆ ಎಳೆದುಕೊಂಡನು.

"ಅಲ್ಲೇನು ನಿಮಗೆ ನೋವುವುದು?"

"ಅಹುದು, ಅಲ್ಲೇ ವಿಪರೀತವಾಗಿ."

"ನಾನು ಅಲ್ಲಿ ಮುಟ್ಟಿದಾಗ ನಿಮಗೆ ನನ್ನ ಬೆರಳ ಸ್ಪರ್ಶದ ಅರಿವಾಯಿತೆ?"

ಆ ಮನುಷ್ಯನು ಉತ್ತರವನ್ನೀಯಲಿಲ್ಲವಾದರೂ, ಅವನ ಕಣ್ಣಲ್ಲಿ ತುಂಬಿದ ನೀರಿನಿಂದ ವೈದ್ಯನಿಗೆ ಸಾಕಷ್ಟು ಅರಿವಾಯಿತು.

"ಇದು ವಿಚಿತ್ರವಾಗಿದೆ. ನನಗೇನೂ ಕಾಣುವುದಿಲ್ಲವಲ್ಲಾ?"

"ನನಗೂ ಸಹ ಕಾಣುವುದಿಲ್ಲ. ಆದರೆ ನೋವು ಮಾತ್ರ ಇದೆ. ಹೀಗಿರುವುದಕ್ಕಿಂತಲೂ ಸಾಯುವುದೇ ಮೇಲೆಂದು ಅನಿಸುತ್ತದೆ."

ವೈದ್ಯನು ಒಂದು ಸೂಕ್ಷ್ಮದರ್ಶಕಯಂತ್ರದಿಂದ ಮತ್ತೊಮ್ಮೆ ಪರೀಕ್ಷಿಸಿ ಕೊನೆಗೆ ತಲೆಯಲ್ಲಾಡಿಸಿದನು.

"ಚರ್ಮವು ಸರಿಯಾಗಿಯೇ ಇದೆಯಲ್ಲ. ಅಲ್ಲಿರುವ ನರಗಳಲ್ಲಿ ರಕ್ತ ಸಂಚಾರವೂ ಸರಿಯಾಗಿದೆ. ಅಲ್ಲಿ ಊತವೂ ಕಾಣುವುದಿಲ್ಲ. ಆರೋಗ್ಯ ವಾಗಿಯೇ ಇದೀರಿ."

"ಆ ಜಾಗದಲ್ಲಿ ಸ್ವಲ್ಪ ಕೆಂಪೇರಿದ ಹಾಗಿದೆ."

"ಎಲ್ಲಿ?"

ಆತನು ಅಂಗೈಯ ಹಿಂಭಾಗದಲ್ಲಿ ಕಾಸಿನಗಲದಷ್ಟು ಜಾಗವನ್ನು ಗುರು ತಿಸಿ "ಇಲ್ಲಿ" ಎಂದನು.

ವೈದ್ಯನು ಆ ಮನುಷ್ಯನ ಮುಖದ ಕಡೆ ನೋಡಿದನು. ನೋಡಿ, ಈ ಹುಚ್ಚನೊಂದಿಗೆ ಹೆಣಗಾಡಬೇಕಾಗಿದೆಯಲ್ಲಾ ಎಂದುಕೊಂಡು, "ನೀವು ಪಟ್ಟಣದಲ್ಲಿಯೇ ಕೆಲವುಕಾಲವಿರಬೇಕಾಗುತ್ತದೆ. ಕೆಲವು ದಿನಗಳಲ್ಲಿಯೇ ಗುಣಪಡಿಸಲು ಯತ್ನಿಸುತ್ತೇನೆ" ಎಂದನು.

"ಒಂದು ನಿಮಿಷವೂ ತಡೆಯಲಾರೆ. ವೈದ್ಯರೇ ನನಗೆ ಹುಚ್ಚೆಂದು ತಿಳಿಯಬೇಡಿ ಅಥವಾ ಯಾವ ಮಂಕೂ ಕವಿದಿಲ್ಲ. ಈ ಕಣ್ಮರೆಯ ಹುಣ್ಣು ತುಂಬಾ ನೋವನ್ನುಂಟುಮಾಡುತ್ತಿದೆ. ಆ ಭಾಗದಲ್ಲಿ ಮೂಳೆಯವರೆಗಿರುವ ಮಾಂಸವನ್ನು ಕೊಯ್ದು ಹಾಕಿ ಬಿಡಿ."

"ಆ ಕೆಲಸವನ್ನು ನಾನು ಮಾಡುವುದಿಲ್ಲ"

"ಏಕೆ ಮಾಡಲಾರಿರಿ?"

"ಏಕೆಂದರೆ ನಿಮ್ಮ ಕೈಯಲ್ಲಿ ಏನೂ ಕಾಣಿಸದು. ಅದು ನನ್ನ ಕೈ ಯಷ್ಟೇ ಸರಿಯಾಗಿದೆಯಲ್ಲಾ."

"ನಾನು ಮೋಸಗಾರನೆಂದು ತಿಳಿದಿದ್ದೀರೋ ಇಲ್ಲವೇ ನನಗೆ ಹುಚ್ಚೆಂದು ತೀರ್ಮಾನಿಸಿದ್ದೀರೋ" ಎಂದು ಆ ರೋಗಿಯು ತನ್ನ ಜೇಬಿನಿಂದ ನೂರು

ರೂಪಾಯಿಗಳ ನೋಟನ್ನು ತೆಗೆದು ಮೇಜಿನ ಮೇಲಿಡುತ್ತಾ ಮತ್ತೆ ಶಸ್ತ್ರ ಚಿಕಿತ್ಸೆ ನಡೆಸುವಂತೆ ಕೇಳಿಕೊಂಡನು.

"ನೀವು ಪ್ರಪಂಚದಲ್ಲಿಯ ಐಶ್ವರ್ಯವೆಲ್ಲವನ್ನೂ ನನಗಾಗಿ ಧಾರೆ ಎರೆದರೂ, ನಾನು ನನ್ನ ಶಸ್ತ್ರ ಸಲಕರಣೆಗಳಿಂದ ಆರೋಗ್ಯವಾದ ಭಾಗವನ್ನು ಮುಟ್ಟಲಾರೆ."

"ಏಕೆ ಬಾರದು ?"

"ಅದು ನಮ್ಮ ಕಸಬಿನ ಧರ್ಮವಲ್ಲ. ಇಡೀ ಪ್ರಪಂಚವೇ ನನ್ನನ್ನು ಮೂರ್ಖನೆಂದು ಕರೆಯುವುದು. ನಿಮ್ಮಂಥವರ ಮೂರ್ಖತನಕ್ಕೆ ಸೊಪ್ಪು ಹಾಕಲಿಲ್ಲವೆಂದು ನನ್ನನ್ನು ತೆಗಳುವರು. ಹುಣ್ಣನ್ನು ಪರೀಕ್ಷಿಸಲಾರದ ಹುಂಬ ಈ ವೈದ್ಯ ಎನ್ನುವರು."

"ವೈದ್ಯರೇ ಹೋಗಲಿ. ನಿಮ್ಮಲ್ಲಿ ಇನ್ನೊಂದು ಸಹಾಯವನ್ನು ಕೋರುತ್ತೇನೆ. ಶಸ್ತ್ರ ಚಿಕಿತ್ಸೆಯನ್ನು ನಾನೇ ಮಾಡಿಕೊಳ್ಳಲು ಸಿದ್ಧನಿದ್ದೇನೆ. ನಾನು ನಿಮ್ಮನ್ನು ಕೇಳುವುದು ಇಷ್ಟೇ. ಶಸ್ತ್ರಕ್ರಿಯೆಯಾದ ಮೇಲೆ ಗಾಯವು ಮಾಯುವವರೆಗೂ ತಾವು ನೋಡಿಕೊಳ್ಳಬೇಕು."

ಆ ಮನುಷ್ಯನು ಒಂದು ನಿರ್ಧಾರಕ್ಕೆ ಬಂದು ತನ್ನ ಕೋಟನ್ನು ಬಿಚ್ಚಿ, ಮೇಲಿನ ಜೇಬಿನೊಳಕ್ಕೆ ಕೈಯಿಟ್ಟನು. ತನ್ನಲ್ಲಿ ಬೇರೆ ಸಾಹಿತ್ಯಗಳಾವುವೂ ಇಲ್ಲದುದರಿಂದ ಚಾಕುವೊಂದನ್ನು ಹೊರಕ್ಕೆ ತೆಗೆದನು. ವೈದ್ಯನು ಅಡ್ಡ ಬರುವುದರೊಳಗಾಗಿ ಚಾಕುವಿನಿಂದ ಬಲವಾದ ಇರಿತ ಮಾಡಿದ್ದನು.

"ನಿಲ್ಲಿಸಯ್ಯಾ" ಎಂದು ಬಿರುಸಾಗಿ ವೈದ್ಯನು ಕೂಗಿದನು. ಎಲ್ಲಿ ಆ ಮನುಷ್ಯನು ರಕ್ತನಾಳಗಳನ್ನು ಕೊಯ್ದುಕೊಂಡು ಬಿಡುವನೋ ಎಂಬುವ ಭಯ ವೈದ್ಯನಿಗಿತ್ತು. "ನೀವು ಶಸ್ತ್ರಕ್ರಿಯೆ ಮಾಡಲೇಬೇಕೆಂಬ ಹಟ ತೊಟ್ಟಿರುವುದರಿಂದ, ಆಗಲಿ ಮಾಡುತ್ತೇನೆ" ಎಂದನು.

ಮುಂದೆ "ಆಪರೇಷನ್" ಮಾಡಲು ಸಿದ್ಧಗೊಳಿಸಿದನು. ಸಾಧಾರಣವಾಗಿ ಜನಗಳು ಪ್ರಜ್ಞೆತಪ್ಪಿ ಬೀಳುವುದರಿಂದ ಮುಖವನ್ನು ಸ್ವಲ್ಪ ಮರೆ ಮಾಡಿಕೊಂಡಿರಬೇಕೆಂದು, ಶಸ್ತ್ರಚಿಕಿತ್ಸೆ ಮಾಡುವ ಮೊದಲು ವೈದ್ಯನು ರೋಗಿಗೆ ಎಚ್ಚರಿಕೆ ಕೊಟ್ಟನು.

“ ಏನೂ ಬೇಕಿಲ್ಲ, ನಾನು ನಿಮಗೆ ಆ ಜಾಗವನ್ನು ಸರಿಯಾಗಿ ತೋರಿಸ ಬೇಕಾಗಿದೆ. ಆದ್ದರಿಂದ ಮುಖಕ್ಕೆ ಮರೆ ಮಾಡದಿರುವುದೇ ಒಳಿತು ” ಎಂದನು.

ಚಿಕಿತ್ಸೆ ಪೂರ್ತಿಯಾಗುವವರೆಗೂ ಗಂಭೀರನಾಗಿದ್ದನು. ಮತ್ತು ವೈದ್ಯರಿಗೆ ತಕ್ಕ ಸಲಹೆಗಳನ್ನು ಕೊಡುತ್ತಾ ಸಹಾಯಕನಾಗಿದ್ದನು. ಆತನ ಕೈ ಸ್ವಲ್ಪವೂ ನಡುಗಲಿಲ್ಲ. ಅಲ್ಲದೆ ಕತ್ತರಿಸಿದ ಜಾಗವನ್ನು ತೆಗೆದು ಹಾಕಿದ ಮೇಲೆ ಯಾವುದೋ ದೊಡ್ಡ ಭಾರ ತಲೆಯಿಂದ ಇಳಿಯಿತೆಂಬುವ ಹಾಗೆ ಸಂತೋಷದಿಂದ ನಿಟ್ಟುಸಿರುಬಿಟ್ಟನು.

“ ಈಗ ನಿಮಗೆ ಯಾವ ನೋವೂ ಕಾಣುವುದಿಲ್ಲವೇ ? ” ಶಸ್ತ್ರ ಚಿಕಿತ್ಸ ಕನು ಪ್ರಶ್ನಿಸಿದನು.

“ ಸ್ವಲ್ಪವೂ ಇಲ್ಲ ” ಎಂದು ನಸುನಗುತ್ತಾ ಉತ್ತರವಿತ್ತು “ ನನ್ನ ನೋವೆಲ್ಲವನ್ನೂ ಸಂಪೂರ್ಣವಾಗಿ ಕಿತ್ತೊಗೆದಂತಿದೆ. ಶಸ್ತ್ರಚಿಕಿತ್ಸೆ ಮಾಡು ವಾಗ ಆದ ಗಾಯವು ಮಾತ್ರ, ವಿಪರೀತ ಬಿಸಿಲು ಹೊಡೆದ ಮೇಲೆ, ಬೀಸುವ ತಂಗಾಳಿಯಂತಿದೆ. ಸುರಿದ ರಕ್ತವನ್ನೊಮ್ಮೆ ತೋರಿಸಿ; ಅದು ನನ್ನ ಕಣ್ಣಿಗೆ ತಂಪನ್ನುಂಟುಮಾಡುತ್ತದೆ ” ಎಂದನು.

ಗಾಯಕ್ಕೆ ಬ್ಯಾಂಡೇಜು ಕಟ್ಟಿದ ಮೇಲೆ ಆತನು ಉಲ್ಲಾಸದಿಂದಿರು ವಂತೆ ಕಂಡು ಬಂದನು. ಆತನಲ್ಲಿ ಸಂಪೂರ್ಣ ವ್ಯತ್ಯಾಸ ಕಂಡು ಬಂದಿತು. ಆತನು ಬಹು ಪ್ರೀತಿಯಿಂದ ವೈದ್ಯನ ಕೈ ಹಿಡಿದು ಕುಲುಕುತ್ತಾ,

“ ನಿಮ್ಮಿಂದ ತುಂಬಾ ಉಪಕಾರವಾಯಿತು ವೈದ್ಯರೇ ” ಎಂದನು.

ಆತನು ಇಳಿದುಕೊಂಡಿದ್ದ ಹೋಟೆಲಿಗೆ ವೈದ್ಯರು ಆಗಾಗ್ಗೆ ಹೋಗಿ ನೋಡಿಕೊಂಡು ಬರುತಿದ್ದರು. ಆತನು ಬಹು ಗೌರವಸ್ಥ ಮತ್ತು ಐಶ್ವರ್ಯ ವಂತನೆಂತಲೂ ತಿಳಿದುಬಂದಿತು. ಆತನು ತೆಳ್ಳಗೆ ಸುಂದರನಾಗಿದ್ದನು. ಸುಸಂಸ್ಕೃತನೂ ಒಳ್ಳೆಯ ಮನೆತನಕ್ಕೆ ಸೇರಿದವನೂ ಆಗಿದ್ದನು.

ಹುಣ್ಣೆಲ್ಲವೂ ಆರಿದ ಮೇಲೆ ತನ್ನ ಊರಿಗೆ ತೆರಳಿದನು.

ಮೂರುವಾರ ಕಳೆದ ಮೇಲೆ ಆತನು ಮತ್ತೆ ವೈದ್ಯನ ಬಳಿಗೆ ಬಂದನು. ಈಗಲೂ ಮೊದಲಿನಂತೆಯೇ ಕೈಯನ್ನು ಹಿಡಿದುಕೊಂಡು ನರಳುತ್ತಿದ್ದನು.

ಈಗ ಮೊದಲಿಗಿಂತಲೂ ಹೆಚ್ಚು ನೋವೂ, ತೊಂದರೆಯೂ ಆಗುತ್ತಿದೆಯೆಂದು ಹೇಳಿದನು.

ಆತನ ಮುಖವು ಸಪ್ಪೆಯಾಗಿದ್ದಿತು. ಒಂದು ಕುರ್ಚಿಯಲ್ಲಿ ಕುಳಿತು ಒಂದೂ ಮಾತನಾಡದೆ "ಪರೀಕ್ಷಿಸಿ" ಎಂದು ಕೈಯನ್ನು ವೈದ್ಯನೆಡೆಗೆ ಚಾಚಿದನು.

"ಅಯ್ಯೋ ದೇವರೇ! ಏನಾಗಿದೆ?"

"ನೀವು ಪೂರ್ತಿಯಾಗಿ ಚಿಕಿತ್ಸೆ ನಡೆಸಿಲ್ಲ. ಮತ್ತೆ ನೋವು ಪ್ರಾರಂಭವಾಗಿ ಮೊದಲಿಗಿಂತಲೂ ಈಗ ಅತಿಯಾಗಿದೆ. ನನಗೆ ಸಾಕು ಸಾಕಾಗಿ ಹೋಯಿತು. ನಿಮಗೆ ತೊಂದರೆ ಕೊಡಬಾರದೆಂಬ ಉದ್ದೇಶದಿಂದ ಸ್ವಲ್ಪ ದಿನ ತಡೆದೆ. ಆದರೆ ಈಗ ತಡೆಯಲಾಗದು. ನೀವು ಮತ್ತೆ ಆಪರೇಷನ್ ಮಾಡಬೇಕು." ಎಂದು ಗೊಣಗಿದನು.

ವೈದ್ಯನು ಮತ್ತೊಮ್ಮೆ ಪರೀಕ್ಷಿಸಿದನು. ಮೊದಲು ಕೊಯ್ದ ಜಾಗ ಈಗ ಪೂರ್ತಿಯಾಗಿ ವಾಸಿಯಾಗಿ ಹೊಸ ಚರ್ಮವು ಬಂದಿದ್ದಿತು. ಜ್ವರ ಇರಲಿಲ್ಲವಾದರೂ ಬಹುವಾಗಿ ನಡುಗುತ್ತಿದ್ದನು.

"ನಾನು ಇಂತಹದನ್ನು ನೋಡಿಯೂ ಇಲ್ಲ, ಕೇಳಿಯೂ ಇಲ್ಲ."

ಇನ್ನೇನೂ ಮಾಡಲು ಸಾಧ್ಯವಿಲ್ಲದುದರಿಂದ ಆಪರೇಷನ್ ಮಾಡಲೇ ಬೇಕಾಯಿತು. ಈ ಸಲ ಮೊದಲ ಸಲದಂತೆಯೇ ಶಸ್ತ್ರ ಚಿಕಿತ್ಸೆಯೆಲ್ಲವೂ ಸರಾಗವಾಗಿ ನಡೆಯಿತು. ನೋವು ನಿಂತಿತು. ರೋಗಿಯು ಬಹು ಭಾರವನ್ನಿಳಿಸಿಕೊಂಡಂತೆ ಕಂಡನಾದರೂ ಈ ಸಲ ಹಸನ್ಮುಖಿಯಾಗಿರಲಿಲ್ಲ. ವೈದ್ಯರಿಗೆ ವಂದನೆಯನ್ನು ಅರ್ಪಿಸುತ್ತಾ, "ಒಂದು ತಿಂಗಳೊಳಗಾಗಿ ನಾನು ಮತ್ತೆ ಬಂದರೆ ನೀವು ಆಶ್ಚರ್ಯ ಪಡಬೇಕಾದುದಿಲ್ಲ" ಎಂದು ಹೇಳಿ ಹೊರಟು ಹೋದನು.

ಈ ವಿಚಿತ್ರವನ್ನು ತನ್ನ ಸಹೋದ್ಯೋಗಿಗಳೊಂದಿಗೆ ವೈದ್ಯನು ಚರ್ಚಿಸಿದನು. ಪ್ರತಿಯೊಬ್ಬರೂ ಒಂದೊಂದು ರೀತಿಯಾಗಿ ಪರಿಹಾರವನ್ನು ಸೂಚಿಸಿದರು. ಒಟ್ಟಿನಲ್ಲಿ ಯಾರೂ ಸರಿಯಾದ ಸೂಚನೆಯನ್ನು ಕೊಡಲಿಲ್ಲ.

ಒಂದು ತಿಂಗಳುರುಳಿತು. ರೋಗಿಯು ಬರಲಿಲ್ಲ. ಇನ್ನೂ ಕೆಲವು ವಾರಗಳು ಕಳೆದುವು. ಆಮೇಲೆ ರೋಗಿಗೆ ಬದಲು ಒಂದು ಕಾಗದವು ಆತನಿಂದ ಬಂದಿತು. ನೋವು ಮತ್ತೆ ಮರುಕಳಿಸಿರಲಾರದೆಂಬ ಸಂತೋಷದಿಂದ ವೈದ್ಯನು ಆ ಕಾಗದವನ್ನು ಒಡೆದು ನೋಡಿದನು. ಒಕ್ಕಣೆ ಹೀಗಿದ್ದಿತು.

“ ಪ್ರಿಯ ವೈದ್ಯರೇ,

ನನ್ನ ಈ ಗಾಯದ ಕಾರಣವನ್ನೂ ಅದು ಪ್ರಾರಂಭವಾದ ಬಗೆಯನ್ನೂ ತಿಳಿಸದೆ ನಿಮ್ಮನ್ನು ಸಂಶಯದಲ್ಲಿಯೇ ಬಿಟ್ಟು ಸಮಾಧಿಯನ್ನು ಸೇರಲು ನನಗೆ ಇಷ್ಟವಿಲ್ಲ. ನಿಮ್ಮಲ್ಲಿ ಇದರ ಪೂರ್ವಾಪರ ವೃತ್ತಾಂತವನ್ನು ಸಂಪೂರ್ಣವಾಗಿ ಅರಿಕೆ ಮಾಡಿಕೊಳ್ಳಬೇಕೆಂದಿದೇನೆ. ಇದು ಈಗಾಗಲೇ ಮೂರಾವರ್ತಿ ಕಾಣಿಸಿಕೊಂಡಿದೆ. ಮತ್ತೆ ಇವರೊಂದಿಗೆ ಹೆಣಗಾಡಲು ನನಗೆ ಸೇರದು. ಈ ಕಾಗದ ಬಹು ಕಷ್ಟದಿಂದ, ಆ ಗಾಯದ ಮೇಲೆ ಒಂದು ಕೆಂಡವನ್ನಿಟ್ಟು ಅದರ ನೋವನ್ನಡಗಿಸುತ್ತಾ ಬರೆಯುತ್ತಿದೇನೆ.

ಆರು ತಿಂಗಳ ಕೆಳಗೆ ಸುಖಸಂಸಾರಿಯಾಗಿದ್ದೆ. ಬಹು ಐಶ್ವರ್ಯವಂತನಿದ್ದೆ. ಸಂತೃಪ್ತನೂ ಆಗಿದ್ದೆ. ಯುವಕರಿಗೆ ರುಚಿಸುವ ಕೆಲಸಗಳಲೆಲ್ಲಾ ಭಾಗವಹಿಸುತ್ತಿದ್ದೆ. ಒಂದು ವರುಷದ ಕೆಳಗೆ ಮದುವೆಯಾದೆ. ಅದು ಪೂರ್ಣವಾಗಿ ಪ್ರೇಮದಮದುವೆ. ಬಹು ಸುಂದರಳೂ, ಸುಸಂಸ್ಕೃತಳೂ, ಕೋಮಲ ಕಾಯಳೂ ಆದ ಸ್ತ್ರೀಯೊಬ್ಬಳು ನನ್ನ ಕೈಹಿಡಿದಳು. ನಮ್ಮ ಊರಿಗೆ ಅನತಿದೂರದಲ್ಲಿಯೇ ಇದ್ದ ಒಬ್ಬ ರಾಜಮನೆತನದ ಸ್ತ್ರೀಯು ಈಕೆಗೆ ಗೆಳತಿಯಾಗಿದ್ದಳು. ಈ ಕೋಮಲಕಾಯಳು ನನ್ನಲ್ಲಿ ಪೂರ್ಣ ಅನುರಕ್ತೆಯಾಗಿದ್ದಳಲ್ಲದೆ, ನನಗಾಗಿ ತನ್ನ ಇಡೀ ಜೀವನವನ್ನು ಮೀಸಲಿಡಲೂ ಸಿದ್ಧಳಾಗಿದ್ದಳು. ನಾವು ಆರು ತಿಂಗಳು ಸುಖದಿಂದ ಕಾಲಕಳೆದೆವು. ಪ್ರತಿದಿನವೂ ಹೊಸ ಹೊಸ ಸುಖಾನುಭವಗಳನ್ನು ಪಡೆಯುತ್ತಿದ್ದೆವು. ನಾನು ಪಟ್ಟಣಕ್ಕೆ ಹೋಗಬೇಕಾಗಿ ಬಂದಾಗ ಅವಳೂ ನನ್ನೊಂದಿಗೇ ಬರುತ್ತಿದ್ದಳು. ತನ್ನ ಗೆಳತಿಯರನ್ನು ನೋಡಲು ಹೋಗಬೇಕಾದರೂ ನನ್ನನ್ನು ಬಿಟ್ಟಿರಲು ಆಕೆಗೆ ಆಗುತ್ತಿರಲಿಲ್ಲ. ನನ್ನಲ್ಲಿ ಅವಳಿಗಿದ್ದ ಪ್ರೇಮವನ್ನು ನೋಡಿ ಆಕೆಯ ಗೆಳತಿಯರಿಗೂ ಬೇಜಾರಾಗಿರಬಹುದು. ಆಕೆಯು ಬಹು ಮುದ್ದಾದ ಹುಡುಗಿ ಎಂದು ನನಗೆ ಎನ್ನಿಸತೊಡಗಿತು.

ಏನು ಕಾರಣವೋ ಆಕೆಗೆ ಆ ನನ್ನ ಪ್ರೀತಿಯೆಲ್ಲವೂ ಬರಿಯ ನಟನೆ ಯೆಂದು ತೋರಿತು. ಮಾನವನು ತನ್ನ ಸುಖದ ಮಧ್ಯದಲ್ಲಿ ಕಷ್ಟದ ಬೆನ್ನು ಹತ್ತುವಷ್ಟು ದಡ್ಡನಾಗಿರುತ್ತಾನೆ ಎಂದು ನಾನು ತಿಳಿದಿರಲಿಲ್ಲ. (Man is foolish enough to seek misery in the midst of his greatest happiness).

ಆಕೆಯ ಬಳಿ ಪುಟ್ಟ ಮೇಜೊಂದು ಇದ್ದಿತು. ಅದಕ್ಕೆ ಒಂದು ಡ್ರಾಯರ್ ಇದ್ದಿತು. ಅದನ್ನು ಯಾವಾಗಲೂ ಬೀಗ ಹಾಕಿಟ್ಟಿರುತ್ತಿದ್ದಳು. ಇದು ನನ್ನಲ್ಲಿ ಸಂಶಯ ಹುಟ್ಟಿಸಲು ಕಾರಣವಾಯಿತು. ಅದರ ಬೀಗವನ್ನು ಮರೆತಾದರೂ ಹಾಕದೆ ಇಡುತ್ತಿರಲಿಲ್ಲ ಮತ್ತು ಬೀಗದಕೈ ಸಿಗುವಂತಿಡುತ್ತಿರಲಿಲ್ಲ. ಅಷ್ಟು ಎಚ್ಚರಿಕೆಯಿಂದಿರಲು ವಿಚಾರವಾದರೂ ಏನು? ನನ್ನಲ್ಲಿ ಅಸೂಯೆಯು ಉತ್ಪನ್ನವಾಗಿ ಹುಚ್ಚು ಹಿಡಿಸಿತು. ಅವಳ ಪ್ರೇಮ ಪೂರಿತ ಆಲಿಂಗನಗಳನ್ನೂ, ಚುಂಬನಗಳನ್ನೂ, ನಲ್ಮೆಯನ್ನು ಸೂಸುವ ಕಣ್ಣುಗಳನ್ನೂ ನಂಬಲಾರದಾದೆ. ಇದೆಲ್ಲವೂ ನನ್ನನ್ನು ಮೋಸಪಡಿಸುವ ಉದ್ದೇಶದಿಂದಿರಲಾರದೇಕೆ?

ಒಂದು ದಿನ ತನ್ನರಮನೆಯಲ್ಲಿ ಕಾಲಕಳೆಯಲು ಅವಳ ಗೆಳತಿಯು ಅವಳನ್ನು ಕರೆದೊಯ್ಯಲು ಬಂದಳು. ನಾನು ಅಲ್ಲಿಗೆ ಸಂಜೆಯಾದ ಮೇಲೆ ಬರಲು ಮಾತುಕೊಟ್ಟೆ.

ಅವಳು ಗಾಡಿಯಲ್ಲಿ ಕುಳಿತು ಅಂಗಳವನ್ನು ಬಿಟ್ಟ ಕೂಡಲೇ ನಾನು ಆ ಪುಟ್ಟ ಮೇಜಿನ ಡ್ರಾಯರನ್ನು ತೆರೆಯಲು ಉದ್ಯುಕ್ತನಾದೆ. ಕಡೆಗೆ ತೆರೆಯಲು ಸಾಧ್ಯವಾಯಿತು. ಅದರಲ್ಲಿ ಹೆಂಗಸರ ಸಾಮಾನುಗಳು ಅನೇಕವಿದ್ದುವು. ಆ ಮಧ್ಯೆ ರೇಷ್ಮೆಯ ಬಟ್ಟೆಯಿಂದ ಸುತ್ತಿದ ಕಾಗದಗಳ ಕಂತೆಯೊಂದಿತ್ತು. ಅವು ಪ್ರಿಯನು ತನ್ನ ಪ್ರೇಯಸಿಗೆ ಬರೆದ ಕಾಗದಗಳಾಗಿದ್ದುವು. ಅದನ್ನು ನಶ್ಯದ ಬಣ್ಣದ ದಾರದಿಂದ ಕಟ್ಟಿದ್ದಿತು.

ಅಂತಹ ತಪ್ಪು ನಡತೆಯನ್ನು ತಾರತಮ್ಯ ಜ್ಞಾನದಿಂದ ವಿಚಾರ ಮಾಡಲು ಹೊರಡಲಿಲ್ಲ. ಮದುವೆಯಾಗುವ ಮೊದಲಿನ ಆಕೆಯ ಜೀವನದ ಶುದ್ಧಾಶುದ್ಧತೆಯನ್ನು ಚರ್ಚಿಸಲಿಲ್ಲ. ಯಾವುದೋ ಶಕ್ತಿ ಮುನ್ನುಗ್ಗು ವಂತೆ ಹೇಳಿತು. ಆ ಕಾಗದಗಳೆಲ್ಲವೂ ಯಾವುದೋ ಕಾಲದ್ದಾಗಿರ

ಬಾರದೇ? ದಾರವನ್ನು ಬಿಚ್ಚಿ, ಆ ಕಾಗದವನ್ನು ಒಂದೊಂದನ್ನಾಗಿ ಓದಲಾರಂಭಿಸಿದೆ.

ಆ ಕಾಗದಗಳು ಯಾವ ಮನುಷ್ಯರೇ ಆಗಲಿ ಮಾಡಬಾರದಂತಹ ಕೆಟ್ಟ ಕೆಲಸಕ್ಕೆ ಪ್ರೇರಿಪಿಸುವುದಿತ್ತು. ಅವೆಲ್ಲವೂ ನನಗೆ ಶೀರ ಹತ್ತಿರವ ಗೆಳೆಯನಿಂದ ಬರೆದವಾಗಿದ್ದವು. ಅವುಗಳ ಒಕ್ಕಣೆಯ ರೀತಿ....ಅದು ಬಹು ಹತ್ತಿರದ ಸಂಬಂಧವನ್ನೂ, ಕಾಮದ ಅತಿರೇಕವನ್ನೂ ಸೂಚಿಸುತ್ತಿದ್ದವು. ಅವುಗಳನ್ನು ಮುಚ್ಚಿಡಬೇಕೆಂದು ಹೇಗೆ ಕೋರಿದ್ದ! ಮುರ್ಖಳಗಂಡಂದಿರ ಮೇಲಿ ಬರೆದ ವ್ಯಾಖ್ಯಾನ ಹೇಗಿತ್ತು! ಹೇಗೆ ಅವನು, ಅವಳ ಗಂಡನಿಗೆ ತನ್ನ ಸಂಬಂಧ ತಿಳಿಯದಂತಿರಬೇಕೆಂದು ಬೇಡಿದ್ದ! ಇವೆಲ್ಲವೂ ನಮ್ಮ ಮದುವೆ ಯಾದ ಮೇಲೆ ಬರೆದವೇ ಆಗಿದ್ದವು. ನಾನು ಅವಳ ನಟನೆಯೆಲ್ಲವನ್ನೂ ನಿಜ ವೆಂದುಕೊಂಡು ಸುಖದಿಂದಿದ್ದೆನಲ್ಲವೆ! ನನ್ನ ಮನಸ್ಸಿನ ಸ್ಥಿತಿಯನ್ನು ಹೇಳಲು ದುಸ್ಸಾಧ್ಯ. ಅಸೂಯೆಯು ಸಂಪೂರ್ಣವಾಗಿ ನನ್ನಲ್ಲಿ ಮನೆಮಾಡಿತು. ಆ ಮೇಲೆ ನಾನು ಆ ಕಾಗದಗಳನ್ನೆಲ್ಲಾ ಮಡಿಸಿ ಅದರ ಸ್ವಸ್ಥಾನದಲ್ಲಿ ಭದ್ರಸಡಿಸಿದೆ.

ಅರಮನೆಗೆ ನಾನಂದು ಹೋಗದಿದ್ದಲ್ಲಿ ರಾತ್ರಿಯೇ ಹಿಂತಿರುಗುವಳೆಂದು ಭಾವಿಸಿದ್ದೆ. ಹಾಗೆಯೇ ಆಯಿತು. ಹಸನ್ಮುಖಿಯಾಗಿ ಗಾಡಿಯಿಂದಿಳಿದು ನನ್ನೆಡೆಗೆ ಪ್ರೇಮಪೂರಿತ ದೃಷ್ಟಿಯನ್ನು ಬೀರುತ್ತಾ ಬಂದಳು. ನಾನು ಮೊದಲಿನಂತೆಯೇ ನಡೆಯಲು ಪ್ರಯತ್ನಪಟ್ಟೆ.

ನಿತ್ಯಗಟ್ಟಲೆಯಂತೆ ಅಂದೂ ಕೆಲವು ಕಾಲ ಹರಟೆಹೊಡೆಯುತ್ತಾ ಕುಳಿತಿದ್ದೆವು. ಆ ಮೇಲೆ ಮಲಗಲು ನಮ್ಮನಮ್ಮ ಕೋಣೆಗಳನ್ನು ಹೊಕ್ಕೆವು. ಅಷ್ಟು ಹೊತ್ತಿಗೆ ಮುಂದೆ ಅನುಸರಿಸಬೇಕಾದ ಕ್ರಮವನ್ನು ಸಿದ್ಧಮಾಡಿಕೊಂಡಿದ್ದೆ. ಮಧ್ಯರಾತ್ರಿಯಲ್ಲಿ ಎದ್ದು ಆಕೆಯ ಕೋಣೆಯನ್ನು ಪ್ರವೇಶಿಸಿದೆ. ಆಕೆಯು ಸುಖ ನಿದ್ರೆಯಲ್ಲಿ ಪವಡಿಸಿದ್ದಳು. ಆಕೆಯ ಸುಂದರ ಮುಖವನ್ನೊಮ್ಮೆ ಈಕ್ಷಿಸಿದೆ. ಅಂತಹ ಸುಂದರ ಸ್ತ್ರೀಯಲ್ಲಿಯೂ ದುರಾಲೋಚನೆಗಳು ಮನೆಮಾಡಿಕೊಂಡಿರಬಹುದೇ? ಆಕೆಯ ಸೌಂದರ್ಯವು ನನ್ನ ಅಸೂಯೆಯನ್ನು ಅಡಗಿಸಲು ಸಮರ್ಥವಾಗಿರಲಿಲ್ಲ. ನನ್ನ ಬಲಗೈ

ಯನ್ನು ಆಕೆಯ ಕುತ್ತಿಗೆಯ ಮೇಲಿಟ್ಟು ಬಲವಾಗಿ ಅಮುಕಿದೆ. ಆಕೆ ಆಗ ಕಣ್ಣು ತೆರೆದು ಭಯಭ್ರಾಂತಳಾಗಿ ಒಂದು ನಿಮಿಷ ನನ್ನನ್ನೇ ನೋಡುತ್ತಾ ಕಣ್ಮುಚ್ಚಿ ಮರಣಹೊಂದಿದಳು. ಸಾವಿನಿಂದ ಪಾರಾಗಲು ಸ್ವಲ್ಪವೂ ಪ್ರಯತ್ನ ಪಡದೆ ಶಾಂತಳಾಗಿದ್ದು ಮೃತ್ಯುವಶಳಾದಳು. ನನ್ನ ಕಾರ್ಯಕ್ಕೆ ಪ್ರತೀಕಾರ ಮಾಡುವ ಚಿಹ್ನೆ ಯಾವುದೂ ಆಕೆಯ ಮುಖದಲ್ಲಿ ಕಾಣಲಿಲ್ಲ. ಒಂದು ತೊಟ್ಟು ರಕ್ತ ಆಕೆಯ ತುಟಿಯಿಂದ ಉದುರಿ ಕೈಮೇಲೆ ಬಿತ್ತು—ಅದು ಬಿದ್ದ ಜಾಗ ನಿಮಗೆ ಗೊತ್ತು. ಮಾರನೆಯ ದಿನ ಪೂರ್ತಿ ಒಣಗಿದ ಮೇಲೆ ನೋಡಿಕೊಂಡೆ. ಹೆಚ್ಚು ಗಲಾಟೆಯಿಲ್ಲದೆ ಆಕೆಯ ಸಮಾಧಿ ಮಾಡಿದೆ. ನಾನು ಶ್ರೀಮಂತನಾದುದರಿಂದ ಪೋಲೀಸರ ಭಯವಿರಲಿಲ್ಲ. ಅಲ್ಲದೆ ಆಕೆಯು ನನ್ನ ಹೆಂಡತಿಯಾದ್ದರಿಂದ ಯಾರೂ ಅನುಮಾನಪಡುವಂತಿರಲಿಲ್ಲ. ನನ್ನನ್ನು ಸಾವಿನ ಬಗ್ಗೆ ವಿಚಾರಿಸಲು ಆಕೆಯ ನಂಟರಿಷ್ಟರಾಗಲೀ, ಆಪ್ತರಾಗಲೀ ಇರಲಿಲ್ಲ. ಅನುಮಾನ ಬರದಿರಲೆಂಬ ಕಾರಣದಿಂದ ನಾನು ಅವಳ ಸಾವನ್ನು ಪ್ರಸಿದ್ಧಪಡಿಸಿದೆ.

ಮುಂದೆ ನನ್ನ ಹೃದಯದಲ್ಲಿ ಯಾವ ತಳಮಳವೂ ಇರಲಿಲ್ಲ. ನಾನೇನೋ ಆಕೆಗೆ ಕಠಿಣ ಹೃದಯದವನಾದೆ. ಆದರೆ ಆಕೆ ಆ ಶಿಕ್ಷೆಗೆ ಅರ್ಹಳಾಗಿದ್ದಳು. ಆಕೆಯನ್ನು ಮರೆಯಲು ನನಗೇನೂ ಕಷ್ಟವಾಗಲಿಲ್ಲ. ಯಾವ ಕೊಲೆಗಾರನೂ ನನ್ನಷ್ಟು ನಿಶ್ಚಿಂತನಾಗಿಯೂ, ನಿರಾಯಾಸವಾಗಿಯೂ ಅಂತಹ ಕೃತ್ಯವನ್ನು ನಡೆಸಿಲ್ಲ.

ನಾನು ಮನೆಗೆ ಹಿಂತಿರುಗುವಷ್ಟರಲ್ಲಿ ರಾಜಮನೆತನದ ಆ ಗೆಳತಿಯು ಆಗ ತಾನೆ ಬಂದಿದ್ದಳು. ಆಕೆಯು ಬಹು ದುಃಖಿಯಾಗಿದ್ದಳಲ್ಲದೆ ಯಾವುದೋ ವಿಚಾರಮಗ್ನಳಾಗಿದ್ದಳು. ನನ್ನಾಕೆಯ ಆಕಸ್ಮಿಕ ಮರಣದ ಭಯಂಕರ ವಾರ್ತೆಯು ಆಕೆಯನ್ನು ಮಂಕು ಮಾಡಿತ್ತು. ಆಕೆಯು ವಿಚಿತ್ರ ರೀತಿಯಲ್ಲಿ ನನ್ನನ್ನು ಸಮಾಧಾನಪಡಿಸಲು ಪ್ರಯತ್ನಪಟ್ಟಳು. ನನಗೆ ಯಾವ ಸಮಾಧಾನವೂ ಬೇಕಾಗಿರಲಿಲ್ಲ. ಅಲ್ಲದೆ ಅವಳ ಮಾತನ್ನು ಕೇಳಲು ಕಾತುರನಾಗಿಯೂ ಇರಲಿಲ್ಲ. ಆ ಮೇಲೆ ನನಗೆ ಅಂಗಲಾಚಿ ಒಂದು ವಿಚಾರ ಕೇಳಿದಳು.

ಆಕೆಯು ಕಾಗದಗಳ ಕಟ್ಟೊಂದನ್ನು ಭದ್ರವಾಗಿಟ್ಟಿರಲು ಸಾಧ್ಯವಿಲ್ಲದ್ದ ರಿಂದ ನನ್ನಾಕೆಗೆ ಕೊಟ್ಟಿರುವುದಾಗಿಯೂ ಅದನ್ನು ಹಿಂದಕ್ಕೆ ಕೊಡಬೇಕೆಂದೂ ಕೇಳಿಕೊಂಡಳು. ಆ ಮಾತುಗಳನ್ನು ಕೇಳಿದ ಕೂಡಲೇ ನನಗೆ ಸಿಡಿಲು ಬಡಿ ದಂತಾಯಿತು. ನನ್ನ ನರಗಳ ಶಕ್ತಿಯೆಲ್ಲವೂ ಕುಗ್ಗಿಹೋಯಿತು. ಧೈರ್ಯ ವನ್ನು ತಂದುಕೊಂಡು ಆ ಕಾಗದದ ಒಕ್ಕಣೆಯೇನೆಂದು ಕೇಳಿದೆ. ಅವಳು ಆ ಪ್ರಶ್ನೆಗೆ ಹೆದರಿದಳು. ಆ ಮೇಲೆ ಹೇಳಿದಳು: “ನಿನ್ನ ಹೆಂಡತಿಯು ಬಹು ಗುಟ್ಟಿನವಳು ಮತ್ತು ಸತ್ಯವಂತಳೆಂಬುದನ್ನು ನಾನು ಬಲ್ಲೆ. ಅದರ ಲ್ಲೇನಿದೆ ಎಂಬುದನ್ನು ಕೇಳಲೂ ಇಲ್ಲ. ಅದನ್ನೂ ತೆರೆದು ನೋಡುವುದಿಲ್ಲ ವೆಂದು ಮಾತೂಕೊಟ್ಟಿದ್ದಳು.”

“ನಿಮ್ಮ ಕಾಗದಗಳನ್ನು ಎಲ್ಲಿಟ್ಟಿದ್ದಳೆಂಬುದನ್ನು ಬಲ್ಲಿರಾ?” ಎಂದು ನಾನು ಕೇಳಿದೆ.

“ಅವಳ ಪುಟ್ಟ ಮೇಜಿನ ಡ್ರಾಯರ್‌ನಲ್ಲಿಟ್ಟಿದ್ದೆ ಎಂದು ಹೇಳಿದ್ದಳು. ಅದನ್ನು ನಶ್ಯದ ಬಣ್ಣದ ದಾರದಿಂದ ಕಟ್ಟಿದೆ; ನೀವು ಬಹು ಬೇಗ ಗುರುತಿಸಿ ತಂದುಕೊಡಬಹುದು. ಒಟ್ಟು ಮೂವತ್ತಿವೆ ಆ ಕಟ್ಟಿನಲ್ಲಿ.”

ನಾನು ಆ ಹೆಂಗಸನ್ನು ಪುಟ್ಟ ಮೇಜಿನ ಸ್ಥಳಕ್ಕೆ ಕರೆದೊಯ್ದು ಅದರ ಬಾಗಿಲನ್ನು ತೆರೆದೆ. ಅವಳ ಕಾಗದಗಳನ್ನು ಹೊರಕ್ಕೆ ತೆಗೆದು ಕೊಡುತ್ತಾ “ಇದೇನೇ ನಿಮ್ಮ ಕಾಗದಗಳು?” ಎಂದೆ.

ಬಹು ಆತುರದಿಂದ ಅವುಗಳಿಗಾಗಿ ಕೈಚಾಚಿದಳು. ನನ್ನ ಮುಖ ಚರ್ಯೆಯಿಂದ ಎಲ್ಲಿ ಆದ ಅನಾಹುತವನ್ನು ಊಹಿಸಿ ಬಿಡುವಳೋ ಎಂಬ ಭಯದಿಂದ ನಾನು ತಲೆಯೆತ್ತಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಆಕೆಯು ಹೊರಟುಹೋದಳು.

ರಕ್ತದ ಹನಿ ಉದುರಿದ ಜಾಗದಲ್ಲಿ ಒಂದು ವಾರದಲ್ಲಿಯೇ ಭಯಂಕರ ವಾದ ನೋವು ಕಾಣಿಸಿಕೊಂಡಿತು. ಇನ್ನುಳಿದುದೆಲ್ಲವೂ ನಿಮಗೆ ತಿಳಿದಿದೆ. ಇವೆಲ್ಲವೂ ‘Auto suggstion’ ಎಂಬುದನ್ನು ನಾನು ಬಲ್ಲೆ. ಆದರೆ ಅದರಿಂದ ತಪ್ಪಿಸಿಕೊಳ್ಳಲು ಆಗದವನಾಗಿದ್ದೇನೆ. ವಿವೇಚನೆಯಿಲ್ಲದೆ, ನಿರಪ ರಾಧಿಯೂ, ನಿರ್ವಂಚಕಳೂ ಆದ ನನ್ನ ಹೆಂಡತಿಯನ್ನು ಕೊಲೆಮಾಡಿದುದಕ್ಕೆ

ದೇವರು ವಿಧಿಸಿದ ಶಿಕ್ಷೆಯೆಂದು ಇದನ್ನು ಭಾವಿಸಿದೇನೆ. ಇನ್ನು ಅದರೊಡನೆ ಬಹು ಕಾಲ ಹೆಣಗಬೇಕಾದ ಪ್ರಮೇಯವೇನಿಲ್ಲ. ನಾನೂ ಇಷ್ಟರಲ್ಲಿಯೇ ಆಕೆಯನ್ನು ಸೇರಿ ಅಲ್ಲಿ ಆಕೆಯ ಕ್ಷಮೆಯನ್ನು ಬೇಡುತ್ತೇನೆ. ಆಕೆಯು ನನ್ನನ್ನು ಖಂಡಿತವಾಗಿಯೂ ಮನ್ನಿಸುವಳು, ನನ್ನನ್ನು ಮೊದಲಿನಂತೆಯೇ ಪ್ರೀತಿಸುವಳು ಎಂಬುದನ್ನು ಬಲ್ಲೆ. ವೈದ್ಯರೇ ನಿಮ್ಮ ಸಹಾಯಕ್ಕೆ ಚಿರ ಋಣಿಯಾಗಿದ್ದೇನೆ—ನಮಸ್ಕಾರ. ”



[ಈ ಕಥೆಗಳಲ್ಲಿ ಬರುವ ವ್ಯಕ್ತಿಗಳೆಲ್ಲವೂ ಕಲ್ಪನಾರಾಜ್ಯಕ್ಕೆ ಸೇರಿದವೇ ಹೊರತು ಯಾರನ್ನೂ ಉದ್ದೇಶಿಸಿ ಬರೆದವಲ್ಲ.—ಸಂ.]

# ಅನಾಥ ರಕ್ಷಕ

" ಅದೇನೋಪ್ಪ ದೇವರಿಲ್ಲಾಂತ ದೃಢವಾಗಿ ನಂಬಿದೇನೆ. ದೇವರಿದ್ದರೂ ನಮ್ಮ ಹಿರಿಯರು ನಂಬಿರುವ ದೇವರು ಅವನಲ್ಲ. ನಮ್ಮ ತಂದೆಯವರು ಅವನನ್ನು **ಕರುಣಾಮಯ, ಅನಾಥ ರಕ್ಷಕ** ಎಂದು ಎಷ್ಟು ದೊಡ್ಡ ಹೆಸರುಗಳಿಂದ ಕರೆಯುತ್ತಾರೋ...........ನಮ್ಮ ತಂದೆಯವರಿಗೆ ದೇವರಲ್ಲಿರು ವಷ್ಟು ಗುಣಗಳೂ ಇಲ್ಲದಿದ್ದರೆ ಹೋಗಲಿ; ಮಾನವನಿಗಿರಬೇಕಾದ ಹೃದಯ ವಿದ್ದರೆ ಸಾಕಾಗಿತ್ತು. "

" ಇದೇನು ಈ ದಿನ ಇಷ್ಟೊಂದು ವೇದಾಂತ ಪ್ರಾರಂಭ ಮಾಡಿದೀಯೆ? ನೀನೆಲ್ಲೋ ಸಾಮಿಯ ಜೊತೆ ಸೇರಲಿಕ್ಕೆ ಪ್ರಾರಂಭ ಮಾಡಿದೀಯೆ. ಅವನ ಗಾಳಿ ನಿನಗೂ ಬೀಸಿದೆಯೆಂದು ಕಾಣುತ್ತೆ " ಎಂದೆ.

ವೆಂಕಟರಾಯ ನಿಜವಾಗಿಯೂ ಬಹಳ ರಸಿಕ. ಯಾವಾಗಲೂ ಹುಮ್ಮಸಿನಿಂದ ಕೂಡಿ, ಸಂತೋಷವಾಗಿ ಕಾಲ ಕಳೆಯುವುದು; ಸ್ನೇಹಿತ ರೊಂದಿಗಿರುವಾಗ ಚೆಲುವು ಮಾತನಾಡಿ ನಕ್ಕು ನಗಿಸಿ ಆನಂದಪಡಿಸುವುದು ಮತ್ತು ಯಾವಾಗಲೂ ಹಸನ್ಮುಖಿಯಾಗಿರುವುದೂ ಅವನ ಹುಟ್ಟುಗುಣ. ಅವನು ಈ ರೀತಿಯಾಗಿ ಮಾತನಾಡಿದುದು ನನಗೆ ಬಹಳ ಆಶ್ಚರ್ಯವ ನ್ನುಂಟುಮಾಡಿತು. ವೆಂಕಟರಾಯನಿಗೆ ಚಕ್ರಬಂಧ ಸ್ಪರ್ಧೆಯಲ್ಲಿ ಇದು ವರೆವಿಗೂ ಯಾವ ಬಹುಮಾನವೂ ಬಂದಿರಲಿಲ್ಲ. ಆದರೂ ಉತ್ತರಗಳನ್ನು ಪ್ರತಿ ಸಲವೂ ಕಳುಹಿಸುತ್ತಿರುವುದು ಅವನ ವಾಡಿಕೆಯಾಗಿತ್ತು. ಈ ಸಲ ಕಳುಹಿಸುವುದಕ್ಕೆ ಅವರ ತಂದೆಯವರು ದುಡ್ಡನ್ನು ಕೊಡಲಿಲ್ಲವೆಂದು ಕಾಣುತ್ತೆ. ಅದಕ್ಕಾಗಿ ಇಷ್ಟು ಹೇಳಿದನೆಂದುಕೊಂಡು " ಈ ಸಲ ಸ್ಪರ್ಧೆಗೆ ಉತ್ತರ ಕಳುಹಿಸಲಿಲ್ಲವೇನೋ? " ಎಂದೆ.

" ಏನೋ ಹಾಗೆ ಕೇಳುತ್ತೀಯೆ? ಕಳುಹಿಸದೆ ಬಿಡುತ್ತೇನೆಯೇ? ನನ್ನದು ಭಗೀರಥಪ್ರಯತ್ನ. ನಾನು ಸಾಯಬೇಕು ಇಲ್ಲವೇ ಬಹುಮಾನ ಕೊಡೋದು ನಿಲ್ಲಬೇಕು. ಅದುವರೆಗೂ ಕಳುಹಿಸುವುದನ್ನು ಬಿಡುವ ಹಾಗಿಲ್ಲ " ಎಂದು ಹೇಳಿದ.

"ಸರಿಯಪ್ಪ" ಎಂದೆ ನಾನು.

ನಾನು ತಿಳಿದುದು ತಪ್ಪಾಯಿತು. ಅವನ ಹತ್ತಿರ ಮಾತನಾಡುತ್ತ ಬಹಳ ಹೊತ್ತು ಕುಳಿತಿದ್ದೆ. ಈ ಮಧ್ಯೆ ನಾವು ಕುಳಿತಿದ್ದ ಕೋಣೆಯ ಒಳಹಾಲಿನಿಂದ, ಅವನ ತಂಗಿ ಒಳಕ್ಕೆ ಹೋದಳು. ಅವಳಿಗಿನ್ನೂ ಹದಿನೈದು ವರುಷ. ಮುಖವು ಸ್ವಲ್ಪ ಕೃಷ್ಣವರ್ಣದ್ದಾಗಿದ್ದರೂ ತೇಜಸ್ಸಿನಿಂದ ಕೂಡಿ, ನೋಡುವುದಕ್ಕೆ ಬಹಳ ಚೆನ್ನಾಗಿದ್ದಿತು. ಆಕೆಗೆ ಮದುವೆಯೂ ಆಗಿದ್ದಿತು. ಗಂಡನ ಮನೆಯನ್ನು ಸೇರಿ ಮೂರು ತಿಂಗಳಾಗುತ್ತಾ ಬಂದಿತ್ತು. ಇಂದು ಅವಳ ಮುಖವು ಕಳೆಗುಂದಿತ್ತು. "ಯಾಕಿರಬಹುದು? ಏನು? ಎಲ್ಲರಿಗೂ ಪ್ರಿಯರಾದ ಹೆಣ್ಣುಮಕ್ಕಳೂ ವ್ಯಥೆಗೊಳಗಾಗುವುದುಂಟೇ" ಎಂದುಕೊಂಡೆ.

ಹೊತ್ತು ಬಹಳವಾಗಿದ್ದದ್ದರಿಂದ ಹೊರಟು ಬಿಟ್ಟೆ. ಹೊರಡುವಾಗ ವೆಂಕಟರಾಯ ಒಂದು ಕಾಗದವನ್ನು ತಂದುಕೊಟ್ಟು "ಇದನ್ನು ನಿನಗೆ ವಿರಾಮ ಸಿಕ್ಕಿದಾಗ ಓದು. ಈ ಕಥೆಯು ಹೇಗೆ ಕೊನೆಗಾಣಬಹುದೆಂಬುದನ್ನು ಹೇಳು" ಎಂದ. 'ಆಗಲಿ' ಎಂದದನ್ನು ತೆಗೆದು ಜೇಬಿನಲ್ಲಿಟ್ಟುಕೊಂಡು ಮನೆಗೆ ಹೊರಟೆ.

೨

ಎರಡು ದಿನ ನಾನು ಊರಲ್ಲಿರಲಿಲ್ಲ. ಮೂರನೇ ದಿನ ೯ ಘಂಟೆಗೆ ಸರಿಯಾಗಿ ಕಾಲೇಜಿಗೆ ಹೊರಟುಬಿಟ್ಟೆ. ನಮ್ಮ ರಸಾಯನ ಶಾಸ್ತ್ರದ ಅಧ್ಯಾಪಕರು ಪಾಠವನ್ನು ಪ್ರಾರಂಭ ಮಾಡಿದರು. ನನಗೆ ಬೇಜಾರಾಯಿತು. ನನ್ನ ಕೈ ತಾನೇತಾನಾಗಿ ಜೇಬಿನೊಳಗಿನ ಸಾಮಾನೆಲ್ಲವನ್ನೂ ಶೋಧಿಸತೊಡಗಿತು. ವೆಂಕಟರಾಯನು ಕೊಟ್ಟ ಕಥೆಯೂ ಹೊರಬಿತ್ತು. ಅದನ್ನು ಓದುವ ಕುತೂಹಲ ಬಹಳವಾಗಿದ್ದುದರಿಂದ, ತರಗತಿಯಿಂದ ಹೊರಕ್ಕೆ ಬಂದು ಮೈದಾನದಲ್ಲಿ ಕೂತು ಅದನ್ನು ಓದತೊಡಗಿದೆ. ಅದರಲ್ಲಿದ್ದುದನ್ನು ಇದ್ದಹಾಗೆ ಕೆಳಗೆ ಬರೆದಿರುವೆನು.

"ಗಂಡಿನಂತೆ ಹೆಣ್ಣು ಮನುಷ್ಯವರ್ಗಕ್ಕೆ ಸೇರಿದ ಒಂದು ಜೀವ. ಗಂಡಸಿಗೆ ತನ್ನ ಜೀವನಯಾತ್ರೆಯನ್ನು ನಡೆಸಲು ಎಷ್ಟು ಅಧಿಕಾರ

ವಿದೆಯೋ, ಆಕೆಗೂ ಅಷ್ಟೇ ಅಧಿಕಾರವಿದೆ. ಅವರು ಹೇಗೆ ತಾಯ ಹೊಟ್ಟೆಯಲ್ಲಿ ಹುಟ್ಟಿಬಂದರೋ ಅಂತೆಯೇ ನಾನೂ ಜನ್ಮ ತಾಳಿದೆ. ಆದರೆ, ಇದೇನು ! ದೊಡ್ಡವರಾದ ಮೇಲೆ ಗಂಡಸಿಗೂ ಹೆಂಗಸಿಗೂ ಇರುವ ಅಜಗಜಾಂತರ ವ್ಯತ್ಯಾಸ. ಹೆಂಗಸು ಗಂಡಸಿನ ಕಾಮುದಕ್ಕೈಗೊಂಬೆ; ಆಳಿನಂತೆ ಅವನ ಮನೆಯಲ್ಲಿ ದುಡಿಯಬೇಕು. ಅವನಿಗೆ ಅಷ್ಟು ಅಧಿಕಾರವನ್ನು ಕೊಟ್ಟವರಾರು? ಹುಡುಗಿಯಾಗಿದ್ದಾಗ ಹುಡುಗರ ಜೊತೆಯಲ್ಲಿ ಕೂಡಿಯಾಡಬಹುದು. ಈಗಲಾದರೋ ಅವರೆಲ್ಲರೂ ಪುರುಷರಾದರು; ಅವರೊಂದಿಗೆ ಮಾತನ್ನು ಕೂಡ ಆಡಬಾರದಂತೆ. ಅಷ್ಟೇ ಅಲ್ಲ, ಸ್ವಂತ ಅಣ್ಣನು ಬಂದರೆ, ಅವನೊಂದಿಗೂ ಮಾತನಾಡಲು ಸ್ವಾತಂತ್ರ್ಯವಿಲ್ಲ.

ಅಂದು ಪ್ರಾತಃಕಾಲ ಏಳು ಘಂಟೆಯಿರಬಹುದು. ನಾನು ಕಸ ಮುಸುರೆಯನ್ನು ಮುಗಿಸಿ ಮನೆಯ ಮುಂದೆ ರಂಗೋಲೆಯನ್ನಿಡುತ್ತಿದ್ದೆ. ನನ್ನ ಅಣ್ಣ ಬಂದು ನಿಂತ. ಯಾರೆಂದು ಹಿಂತಿರುಗಿದೆ, ನನ್ನ ಅಣ್ಣ.

"ಏಕೆ ಅಣ್ಣ ಇಷ್ಟು ಹೊತ್ತಿನಲ್ಲಿ ಬಂದೆ?"

"ಬರಬಾರದೇನು?"

"ಇಲ್ಲ, ಸುಮ್ಮನೆ ಕೇಳಿದೆ..........." ಎಂದು ಹೇಳಿ ಸುಮ್ಮನಾದೆ. ಅಷ್ಟರಲ್ಲಿ ನನ್ನ ಅತ್ತೆಯವರು ಎಲ್ಲಿದ್ದರೋ ಬಂದುಬಿಟ್ಟರು. "ಏನೇ, ಬೆಳಗಾದರೆ ಒಂದು ದಿನ ಅಣ್ಣ, ಒಂದು ದಿನ ಅಪ್ಪ, ಮತ್ತೊಂದು ದಿನ ಅಮ್ಮ ಇದ್ದೇ ಇರುತ್ತಾರೆ. ನೀನು ಹೀಗೆ ಮಾತನಾಡುತ್ತ ಕುಳಿತುಬಿಟ್ಟರೆ, ಮನೆಯ ಕೆಲಸವನ್ನಿನ್ನಾರು ಬಂದು ಮಾಡುತ್ತಾರೆಯೇ?"

ನಮ್ಮ ಅಣ್ಣ, "ತಾಯಿ, ಬೆಳಗ್ಗೆ ಎದ್ದವರೇ ಹೆಣ್ಣು ಮಕ್ಕಳನ್ನು ಹಾಗೆ ಬೈಯಬಾರದು. ನೀವು ದೊ..............." ಎನ್ನುವಷ್ಟರಲ್ಲಿಯೇ ನನ್ನ ಅತ್ತೆಯವರು, "ಸರಿ, ಸುಮ್ಮನೆ ಇರಪ್ಪ. ನೀವು ಬಹಳ ದೊಡ್ಡ ಮನುಷ್ಯರು. ಅವರಿಗೆ, ನಿಮ್ಮ ಮನೆಯಿಂದ ಹೆಣ್ಣು ತರುವಾಗಲೇ ಸಾರಿ ಸಾರಿ ಹೇಳಿದೆ,—ಸಾಹುಕಾರರ ಮನೆಯ ಹೆಣ್ಣು ತರಬೇಡಿ ನಮಗೂ ಅವರಿಗೂ ಸರಿಬೀಳುವುದಿಲ್ಲ. ಅಲ್ಲಿ ಸುಖವಾಗಿ ಕೂತು ಬೆಳೆದ ಹುಡುಗಿ, ನಮ್ಮ ಅಂತಸ್ತಿಗೆ ಸರಿಬೀಳೂಲ್ಲಾ" ಅಂತ— ಸರಿ, ಈಗ ಅಣ್ಣತಮ್ಮಂದಿರು ಬೇರೆ ಬಂದಿದ್ದಾರೆ, ಅವಳ ಕಡೆ ವಾದಿಸೋದಕ್ಕೆ."

ನನ್ನ ಅಣ್ಣ ಎಲ್‌ಎಲ್. ಬಿ., ಓದಿದವನು. ಮದರಾಸು ಹೈ ಕೋರ್ಟಿನಲ್ಲಿ ಸಹ ವಾದಿಸಿ, ಅಭ್ಯಾಸ ಮಾಡಿ ಬಹಳ ಪ್ರಸಿದ್ಧಿ ಪಡೆದಿರುವವನು. ಆದರೆ ಅವನು ನನ್ನ ಅತ್ತೆಯವರ ಮುಂದೆ ಒಂದು ಮರುಮಾತನ್ನೂ ಆಡಲಾರದೆ ಸೋಲನ್ನು ಒಪ್ಪಿಕೊಂಡು ಹೊರಟು ಹೋಗಬೇಕಾಯಿತು. ಇಷ್ಟೆಲ್ಲಾ ಯಾತಕ್ಕಾಗಿ? ನನ್ನಂಥಹ ದುರ್ಭಾಗ್ಯ ತಂಗಿಗಾಗಿ.

ನನಗೆ ಅವರು ಎಷ್ಟೇ ಕಿರುಕುಳವನ್ನು ಕೊಡಲಿ, ಹೊಡಿಯಲಿ, ಬಡಿಯಲಿ, ಎಲ್ಲವನ್ನೂ ಸಹಿಸಿಕೊಂಡಿರಲು ಸಿದ್ಧಳಾಗಿದೇನೆ. ಅಯ್ಯೋ! ಇದರ ತಾಪವು ನನ್ನ ತಾಯ ಹೃದಯಕ್ಕೆ ತಗಲಿ ಅವಳಿಗೆ ನೋವನ್ನುಂಟು ಮಾಡುತ್ತದೆಯಲ್ಲಾ ಎಂಬುದೊಂದೇ ಕೊರತೆ. ಒಂದೊಂದು ಸಲ ನನಗೆ ನನ್ನ ತಂದೆತಾಯಿಗಳ ಮೇಲೆ ಕೋಪ ಬರುತ್ತದೆ-ಅವರು ತಾನೇ ನನ್ನನ್ನು ಈ ಕಷ್ಟಗಳಿಗೆ ಈಡು ಮಾಡಿದವರೆಂದು. ನನಗೆ ಹನ್ನೆರಡನೆಯ ವಯಸ್ಸು ತುಂಬಿ ಹದಿಮೂರನೆಯದು ನಡೆಯುತ್ತಿದ್ದಾಗ ನನ್ನ ಮದುವೆಯ ವಿಷಯ ಪ್ರಾರಂಭವಾಯಿತು. ನನ್ನ ತಂದೆಯವರು ಗಂಡಿಗಾಗಿ ಹುಡುಕಿ ಹುಡುಕಿ ಬೇಸತ್ತು ಸುಮ್ಮನಾದರು. ಇನ್ನೂ ಎರಡು ಮೂರು ವರ್ಷಗಳ ಕಾಲ ಸುಮ್ಮನಿರಬಹುದಾಗಿತ್ತು. ಆದರೆ ಸಮಾಜ ಕೇಳುತ್ತದೆಯೇ? ನೀವೇ ಹೇಳಿ. ಆಗ ನನ್ನ ತಂದೆಯವರು ಬಹು ಪ್ರಯಾಸಪಟ್ಟು ನನ್ನ ಮಾವನವರನ್ನು ಒಪ್ಪಿಸಿ ಅವರ ಕುಮಾರನನ್ನು ವರನನ್ನಾಗಿ ನಿಶ್ಚಯಿಸಿ ಮದುವೆಯನ್ನು ಗೊತ್ತುಮಾಡಿದರು.

ಮದುವೆಯ ದಿನದ ವರೆಗೂ ನಾನು 'ಅವರನ್ನು' ನೋಡಿರಲಿಲ್ಲ. 'ಅವರ' ವಿದ್ಯಾಬುದ್ಧಿಗಳ ವಿಚಾರವೂ ನನಗೆ ಗೊತ್ತಿರಲಿಲ್ಲ. ಅಂದು ರಾತ್ರಿ ಶ್ರೀ ಮಾತೆಯ ವಿಚಾರವಾಗಿ ಓದುತ್ತಾ ಬಹಳ ಹೊತ್ತು ಎದ್ದಿದ್ದೆ. ಆಗ ನನ್ನ ತಂದೆತಾಯಿಗಳು ಅವರ ಕೊಠಡಿಯಲ್ಲಿ ಮಾತನಾಡುತ್ತಿದ್ದುದು ಕೇಳಿಸಿತು. ಅವರ ಮಾತುಗಳಿಂದ, ನನ್ನ ಯಜಮಾನರಾಗತಕ್ಕವರು ಅಷ್ಟೇನೂ ಬುದ್ಧಿವಂತರಲ್ಲವೆಂತಲೂ, ಅವರ ತಂದೆತಾಯಿಗಳು ಐಶ್ವರ್ಯವಂತರಲ್ಲವೆಂತಲೂ ತಿಳಿಯಿತು. ನನಗೆ ಸಿಡಿಲು ಬಡಿದಂತಾಯಿತು. ಇನ್ನು ಮುಂದೆ ಅವರ ಜೊತೆಯಲ್ಲಿ ನನ್ನ ಜೀವನವನ್ನು ನಡಸಬೇಕೇ? ಬಹು ದುಃಖ ಬಂದಿತು. ಅದೇ ಸಮಯಕ್ಕೆ ಗೋಡೆಯ ಮೇಲಿದ್ದ ಒಂದು ಹಲ್ಲಿಯೂ

"ಲೊಚ್, ಲೊಚ್" ಎಂದಿತು. ನನಗೆ ಬಹಳ ಕೋಪ ಬಂದಿತು. "ನನ್ನ ಭವಿಷ್ಯವನ್ನು ನುಡಿಯಲು ನೀನಾರು?" ಎಂದು ಅದನ್ನು ಕಾಲಸಿಗೆ ಬಲಿ ಕೊಡಬೇಕೆಂದಿದ್ದೆ. ಆದರೆ ಗೋಡೆಯ ಮೇಲೆ ಕೆಂಪು ಅಕ್ಷರಗಳಲ್ಲಿ ದೊಡ್ಡದಾಗಿ **"ಸಮಾಜ, ಸಮಾಜ: ಅಲ್ಲ ಅಲ್ಲ, ನಿಮ್ಮ ತಂದೆ ತಾಯಿ,"** ಎಂದು ಬರೆದಿದ್ದಂತೆ ಭಾಸವಾಯಿತು. ಅಯ್ಯೋ! ಎಂದು ಚೀರಿ ಬಿದ್ದುಬಿಟ್ಟೆ..............ಕಣ್ಣು ಬಿಟ್ಟಾಗ, ನನ್ನ ಶಿರವು ತಾಯಿಯ ತೊಡೆಯ ಮೇಲಿದ್ದಿತು. ನನ್ನ ತಾಯಿ ಏನು ಏನೋ ಹೇಳಿ ಸಮಾಧಾನ ಮಾಡತೊಡಗಿದಳು.

ಮೂರು ದಿನಗಳಲ್ಲಿ ಮದುವೆಯು ನಡೆದೇ ಹೋಯಿತು. ಭವಿಷ್ಯವೇ ನಿಜವಾಯಿತು. ಆಗ ನನಗೆ ಶ್ರೀ ಮಾತೆಯ ಜೀವನವು ಜ್ಞಾಪಕಕ್ಕೆ ಬಂದಿತು. ನನ್ನವರು ಬುದ್ಧಿವಂತರಲ್ಲದಿದ್ದರೇನಂತೆ, ಬಡವರಾದರೇನಂತೆ, ಶ್ರೀ ರಾಮಕೃಷ್ಣರನ್ನು ಒಬ್ಬರೂ ಬುದ್ಧಿವಂತರೆಂದು ತಿಳಿದಿರಲಿಲ್ಲ, ಐಶ್ವರ್ಯ ವಂತರೂ ಆಗಿರಲಿಲ್ಲ; ಅಂತಹವರನ್ನೂ ಕೈ ಹಿಡಿದು ಧನ್ಯೆ ಎನಿಸಿಕೊಳ್ಳಲಿಲ್ಲವೇ ಆ ಜಗದ್ವಂದ್ಯೆ ಶ್ರೀ ಶಾರದಾಮಣಿ ದೇವಿ. ನಾನೂ ಆ **ಶ್ರೀ ಮಾತೆಯಂತೆ** ಆದರ್ಶಜೀವನವನ್ನೇ ನಡಸುವೆನು ಎಂದು ಯೋಚಿಸಿ, ನನ್ನ ಮನಸ್ಸನ್ನು ನಾನೇ ಸಂತೈಸಿಕೊಂಡೆ.

* * * * *

ಒಂದು ದಿನ ಸಂಗಾತಿಯರ ಶಾಲೆಗೆ ಜೊತೆಯಲ್ಲಿ ಹೋಗುತ್ತಿದ್ದೆ. ನಮ್ಮ ಹಿಂದೆ ಒಂದೆರಡು ಕಲ್ಲುಗಳು ಬಿದ್ದವು. ಇನ್ನೂ ಸ್ವಲ್ಪಮುಂದೆ ಹೋಗು ವಷ್ಟರಲ್ಲಿ ಇನ್ನೆರಡು ಕಲ್ಲುಗಳು ಬಿದ್ದವು. ನನಗೇಕೋ ಬಹಳ ಭಯ ವಾಯಿತು. ನಾನೂ, ನನ್ನ ಒಡನಾಡಿಗಳೂ ಬೇಗ ಬೇಗ ನಡೆದು ಶಾಲೆ ಯನ್ನು ಸೇರಿದೆವು.

ಮಾರನೆಯ ದಿನವೂ ಇದೇ ರೀತಿಯಾಯಿತು. ಆದ್ದರಿಂದ ಇದನ್ನು ನನ್ನ ತಂದೆಯವರಿಗೆ ತಿಳಿಸಿದೆ. ಅವರು ನಕ್ಕು ಸುಮ್ಮನಾದರು. ಅಂದಿ ನಿಂದ ನನ್ನನ್ನು ತಮ್ಮ ಕಾರಿನಲ್ಲಿ ಕಳುಹಿಸಿಕೊಡಲು ಪ್ರಾರಂಭಮಾಡಿದರು. ನಮ್ಮ ಶಾಲೆ ಮನೆಗೆ ದೂರವಾಗಿರಲಿಲ್ಲ. ಕೆಲವು ದಿನದ ಮೇಲೆ ಕಲ್ಲು

ಎಸೆಯುತ್ತಿದ್ದವರು ನನ್ನ ಯಜಮಾನರೇ ಎಂದೂ, ಇದಕ್ಕೆ ಮೊದಲು ಅವರು ನನ್ನನ್ನು ಓದಿಸಬೇಡವೆಂದು ನನ್ನ ತಂದೆಯವರಿಗೆ ಕಾಗದ ಬರೆದಿದ್ದ ರೆಂತಲೂ, ಅದಕ್ಕೆ ನನ್ನ ತಂದೆಯುವರು ಯಾವ ಉತ್ತರವನ್ನೂ ಕೊಡ ದಿದ್ದುದಕ್ಕಾಗಿ ಹೀಗೆ ಮಾಡಿದರೆಂತಲೂ ತಿಳಿಯಿತು. ನನ್ನ ತಂದೆಯವರು ಆರಾಮಕುರ್ಚಿಯ ಮೇಲೆ ಓದುತ್ತಾ ಕುಳಿತಿದ್ದರು. ನಾನು 'ಅಪ್ಪಾ' ಎಂದೆ.

"ಏನಮ್ಮ" ಎಂದು ನನ್ನ ಕಡೆ ತಿರುಗಿನೋಡಿದರು.

ಬಹು ಧೈರ್ಯಮಾಡಿ ಹೇಳ ತೊಡಗಿದೆ, "ಅಗ್ನಿಸಾಕ್ಷಿಯಾಗಿ ಮದುವೆ ಯಾದ ದಿನವೇ ಅವರು ನನ್ನ ಯಜಮಾನರಾದರು. ಅವರನ್ನು ಆರಾಧ್ಯ ದೇವರನ್ನಾಗಿ ಭಾವಿಸುವುದು ನನ್ನ ಕರ್ತವ್ಯ. ಆದ್ದರಿಂದ ಅವರಿಷ್ಟದಂತೆಯೇ ನಾನು, ಇನ್ನು ಮುಂದೆ ಶಾಲೆಗೆ ಹೋಗುವುದಿಲ್ಲಪ್ಪಾ" ಎಂದೆ.

ಅವರು ಏನೂ ಉತ್ತರ ಕೊಡಲಿಲ್ಲ. ಸುಮ್ಮನಿದ್ದರು. ಅವರ ಕಣ್ಣಿಂದ ಎರಡು ಹನಿಗಳು ಮಾತ್ರ ಉದುರಿದುವು. ಅದೇ ವರುಷವೇ ನಾನು ಪುಷ್ಪವತಿಯಾದೆ. ಇನ್ನೇನು? ನನ್ನಪಾಲಿನ ದೇವರಮನೆ ಸೇರಬೇಕಾಯಿತು.

ಬಾಳಿನ ಗೋಳನ್ನು ಬರೆಯುತ್ತಾ ಹೋದರೆ ಪ್ರಯೋಜನವೇನು? 'ನ ದುಃಖಂ ಪಂಚ ಬಿತ್ಸಹ' ಎಂಬುದು ದ್ವಾಪರ ಯುಗಕ್ಕೆ ಆಗಿಹೋಯಿತು. ಈಗಿನ ಕಾಲದಲ್ಲಿ ನಮ್ಮ ದುಃಖವನ್ನು ಇನ್ನೊಬ್ಬರಿಗೆ ಹೇಳಿಕೊಳ್ಳುವುದಿರಲಿ, ಹೊರಗಿನವರು ನಮ್ಮ ಕಷ್ಟಗಳನ್ನು ವಿಚಾರಿಸದಿದ್ದರೆ ಸಾಕಾಗಿದೆ. ಒಂದು ದಿನ ನಮ್ಮ ಪಕ್ಕದ ಮನೆಯವರು ನನ್ನ ಸ್ಥಿತಿಗೆ ಮರುಕಪಟ್ಟು ಒಂದೆರಡು ಒಳ್ಳೆಯ ಮಾತುಗಳನ್ನಾಡಿದರು. ಅದಕ್ಕಾಗಿ ಅಂದು ರಾತ್ರಿ ನನಗಾದ ಶಿಕ್ಷೆಯನ್ನು ವರ್ಣಿಸಲಾರೆ. ನರಕದಲ್ಲಿಯೂ ಅಂತಹ ಶಿಕ್ಷೆಯನ್ನು ಕೊಡ ಲಾರರು. ಇವೆಲ್ಲಾ ಯಾವ ಪಾಪದ ಫಲ, ಹೆಣ್ಣುಜೀವಿಯಾಗಿ ಹುಟ್ಟಿದ್ದೆ? ಅದೇನೇ ಇರಲಿ ಅನುಭವಿಸುವುದು ನನ್ನ ಪಾಲಿಗೆ ಬಂದಿದೆ. ನನ್ನ ಅತ್ತೆ, ಯಜಮಾನರು ಕೊಟ್ಟ ತೊಂದರೆಯನ್ನು ನಿಮ್ಮಲ್ಲಿ ದೂರಲು ಹೊರಟಿಲ್ಲ. ಇನ್ನು ಮುಂದೆಯಾದರೂ ವಿವೇಕಶಾಲಿಗಳಾದ ನೀವು, ನಿಮ್ಮ ತಂಗಿಯರ ಕಡೆಗೆ ಗಮನ ಕೊಡುವಿರೆಂದು ನನ್ನ ಇಲ್ಲಿನ ವರೆಗಿನ ಕಥೆಯನ್ನು ಹೇಳಿ

ದ್ದೇನೆ. ನನ್ನ ಈ ಕಥೆಯು ಹೇಗೆ ಮುಗಿಯುವುದೋ ನನಗೇ ತಿಳಿಯದಾಗಿದೆ. **ಅನಾಥರಕ್ಷಕನೊಬ್ಬನಿದ್ದಾನೆ.** ಎಲ್ಲವೂ ಅವನ ಚಿತ್ತ.

"ನಿಮ್ಮ **ನಿರ್ಭಾಗ್ಯ** ತಂಗಿ."

ಇದನ್ನು ಓದಿ ಆಶ್ಚರ್ಯವಾಯಿತು. ಯಾರಿರಬಹುದು ಈ ನಿರ್ಭಾಗ್ಯ ತಂಗಿ? ಆಕೆಯ ಜೀವನವು ಹೇಗೆ ಗೊನೆಗಾಣಬಹುದು? ಅದೇಕೋ ನನ್ನೆದೆಯಲ್ಲಿ ಯಾತನೆಯಾದಂತಾಯಿತು.

ಸಾಯಂಕಾಲ ಮನೆಗೆ ಬಂದಮೇಲೆ ಮುಖವನ್ನು ತೊಳೆದುಕೊಂಡು ನನ್ನ ಕೋಣೆಯ ಬಾಗಿಲನ್ನು ಭದ್ರಮಾಡಿ ಮುದ್ದಿನ ಕನ್ನಡದೇವಿಯ ಆರಾಧನೆಗೆಂದು ಕುಳಿತೆ. ಕೈಯಲ್ಲಿ 'ಹಣತೆ' ಎಂಬ ಪುಸ್ತಕವಿದ್ದಿತು. ಕವಿಯು ಹೀಗೆ ಹೇಳ ಹೊರಟಿದ್ದ:—

ದೇವನಿರವು ದಿಟವೊ, ಸಟಿಯೊ—
"ಹೆರರು ತಿಳಿಯದಿರಿತಗಳನು,
ಹದುಗಿ ಇರುವ ಪಾಪಗಳನು,
ಗುಟ್ಟನೆಲ್ಲವ,
ಎದೆಯ ಹೊಗುತಲೆಲ್ಲ ತಿಳಿದು
ಸಂತವಿಡುವ ನೊಬ್ಬನುಂಟು"

'ಉಂಟೆ? ಎಂಬ ಪ್ರಶ್ನೆಯು ನನ್ನಲ್ಲಿ ಸಹಜವಾಗಿ ಎದ್ದುದು ನಿಮಗೆ ಆಶ್ಚರ್ಯವಾಗಿ ಕಾಣಬಹುದು. ನನ್ನ ಅಂತರಂಗದಲ್ಲಿ ಭಾವನಾ ತರಂಗಗಳು ತಾಂಡವವಾಡುತ್ತಿದ್ದವು. "ಅವಳ ಕಥೆ ಹೇಗೆ ಗೊನೆಗಾಣಬಹುದು?" ಎಂಬಪ್ರಶ್ನೆಯು ಮತ್ತೆ ಮತ್ತೆ ನನ್ನ ಹೃದಯವನ್ನು ಕೊರೆಯಲಾರಂಭಿಸಿತು.

ನನ್ನ ಅತ್ತಿಗೆಯವರು ಕರೆದಂತಾಯಿತು. ಪುಸ್ತಕವನ್ನು ಮುಚ್ಚಿಟ್ಟು ಎದ್ದು ಹೋಗಿ ವಿಚಾರಿಸಿದೆ. "ನಿನ್ನ ಸ್ನೇಹಿತನ ತಂಗಿ ಇರಲಿಲ್ಲವೇನೋ, ಅವಳು ಬಾವಿಗೆ ಹಾರಿಕೊಂಡಳಂತೆ. ಇವತ್ತು ಹೆಣ ತೆಗೆದಿದಾರೆಯಂತೆ. ಹೋಗಿ ವಿಚಾರಿಸಿಕೊಂಡುಬಾಪ್ಪಾ" ಎಂದರು. ಅಯ್ಯೋ! ಅವಳ ಜೀವನವು ಹೀಗೆ ಮುಗಿಯಬೇಕೆಂದಿದ್ದಿತೇನು? ಕೂಡಲೇ ವೆಂಕಟರಾಯನ ಮನೆಯ ಕಡೆಗೆ ಧಾವಿಸಿದೆ.

ಶವವನ್ನು ಬಾವಿಯಿಂದ ತೆಗೆದಿದ್ದರು. ಆ ಮುಖವು ನನಗೆ ಭಯಾನಕವಾಗಿ ತೋರಲಿಲ್ಲ. ಆ ತೇಜೋವಿಹೀನವಾದ ಮುಖದಲ್ಲಿಯೂ ಕಿರುನಗೆಯೊಂದು ಹೊರಚಿಮ್ಮುತ್ತು. ಭಗವಂತನೆಡೆಗೆ ಸಾರಿದ ಆಕೆ, ಹೇಡಿಗಳಂತೆ ಕಂಬನಿಸುರಿಸುತ್ತಿರುವ ತಂದೆತಾಯಿಗಳನ್ನು ನೋಡಿ ಹುಚ್ಚುನಗೆಯೊಂದನ್ನು ನಗುತ್ತಿರುವಳೇನೋ? ವೆಂಕಟರಾಯನು ವಿಚಾರ ಶೂನ್ಯನಾಗಿ ತನ್ನ ತಂಗಿಯ ಶವವನ್ನು ನೋಡುತ್ತಿದ್ದ.

ಇಂತಹ ದುಷ್ಟ ಸಮಾಜದಲ್ಲಿ ಆಕೆಯನ್ನು ಇರಗೊಡಿಸಲು ಒಲ್ಲನೆಯೋ, ಏನೋ, ತನ್ನೆಡೆಗೆ ದೇವರು ಅವಳನ್ನು ಕರೆದುಕೊಂಡು ಬಿಟ್ಟ. ದೇವರು ಅನಾಥರಕ್ಷಕನಲ್ಲವೇ?

# ಆನಂದತೀರ್ಥ

"ಟಾಂಗಾ ಎಲ್ಲಿಗೆ ಹೊಡಿಯಲಿ ಸ್ವಾಮೀಜಿ"

"ಹೊಡಿ, ಮುಂದೆ ಮುಂದೆ."

"ಸರಿ, ಸ್ವಾಮೀಜಿ."

ಟಾಂಗಾ ಬಿರುಸಾಗಿಯೇ ಮುಂದೆ ಸಾಗಿತ್ತು. ಅದರಲ್ಲಿ ಪವಡಿಸಿದ್ದ ಸ್ವಾಮಿ ಆನಂದತೀರ್ಥರ ಮನಸ್ಸು ಇನ್ನೂ ಹೆಚ್ಚು ವೇಗದಿಂದ ಸಾಗಿತ್ತು. ಅವರ ಸ್ಮೃತಿಪಥದಲ್ಲಿ ಅನೇಕ ಚಿತ್ರಗಳು ಒಂದೊಂದಾಗಿ ಬರ ತೊಡಗಿದವು. ಮಾತೆಯ ಮಮತೆಯ ಮುಖವನ್ನು ಮರೆಯುವುದಾದರೂ ಎಂತು ? ಸ್ವಾಮೀಜಿಯ ಮನಸ್ಸಿಗೂ ಹೃದಯಕ್ಕೂ ತುಮುಲಯುದ್ಧವಾಗ ತೊಡಗಿತು.

"ನೀನು ಸನ್ಯಾಸಿ ಸಕಲವನ್ನೂ ತ್ಯಾಗ ಮಾಡಿರುವೆ, ಇನ್ನೂ ಮೋಹವನ್ನು ಬಿಟ್ಟಿರಲು ಸಾಧ್ಯವಿಲ್ಲವೆ?" ಎಂದಿತು ಮನಸ್ಸು.

"ಅದು ಹೇಗೆ ಸಾಧ್ಯ? ನಾನು ಯಾರು? ನನ್ನ ತಾಯಿಯು ತನ್ನ ಮನೋರಾಜ್ಯದಲ್ಲಿ ವರುಷಾನುಗಟ್ಟಳೆ ಚಿತ್ರಿಸಿದ ಮೂರ್ತಿಯ ನಿಜ ಸ್ವರೂಪವಲ್ಲವೆ ನಾನು? ಇಂದು ನನ್ನ ಜ್ಞಾನಾರ್ಜನೆಗೆ, ಆದರ್ಶ ಸಾಧನೆಗೆ ಸಾಧಕವಾದ ಈ ದೇಹವನ್ನು ಕೊಟ್ಟವಳು ಯಾರು? ನನಗಾಗಿ ಆಕೆಯು ಎಷ್ಟು ಯಾತನೆಯನ್ನು ಸಹಿಸಿರುವಳು. ನನ್ನ ಬಾಲ್ಯದ ಚೇಷ್ಟೆಗಳಿಂದ ಆಕೆಗೆ ಎಷ್ಟು ತೊಂದರೆಯಾಗಿರಬಹುದು. ಆತ್ತಾಗ ಸಂತೈಸಿ, ನಕ್ಕು ನಗಿಸಿ, ನಕ್ಕಾಗ ನಲ್ಮೆಯಿಂದ ಮುದ್ದಿಟ್ಟು, ಮುಂದಾಲೋಚನೆ ಮಾಡುತ್ತಾ ಮಗುವಿನ ಅಭಿವೃದ್ಧಿಗಾಗಿ ಹಗಲಿರುಳೂ ಹಂಬಲಿಸುವ ತಾಯಿಯನ್ನು ಮರೆಯುವುದು ತರವೆ" ಎಂದಿತು ಹೃದಯ.

ಸ್ವಾಮೀಜಿಯು ಒಮ್ಮೆ ಹೃದಯದ ಕೂಗಿಗೆ, ಒಮ್ಮೆ ಮನಸಿನ ವಿವೇಚನೆಗೆ ಕಿವಿಗೊಟ್ಟು ಆಲಿಸಿದರು. ಈ ಯೋಚನಾತರಂಗಗಳ ತಿಕ್ಕಾಟದಿಂದ ಹುಬ್ಬುಗಂಟಿಕ್ಕಿ ಮುಖ ಸಿಂಡರಿಸಿ ನಿಂತರೆ ಮರುಕ್ಷಣದಲ್ಲಿಯೇ ಹಿಂದಿನ

ಸವಿಸ್ಮೃತಿಗಳಿಂದ ಹರುಷವುಕ್ಕಿ ಮುಖ ಪ್ರಫುಲ್ಲಿತವಾಯಿತು. ಕಿರುನಗೆಯು ತೆರೆಗಳು ಹಾದುಹೋದವು.

ಸ್ವಾಮೀಜಿಯು ತನ್ನ ಜನ್ಮಸ್ಥಳವನ್ನು ಬಿಟ್ಟು ಹೊರಟದ್ದು ಇಂದಿಗೆ ಸರಿಯಾಗಿ ಹದಿನಾಲ್ಕು ವರುಷಗಳಾಗಿದ್ದುವು. ಆಗ ಅವರಿಗೆ ಹದಿನೈದು ವರುಷಗಳು ಮಾತ್ರವಾಗಿದ್ದಿತು. ಅಷ್ಟೇ ವರುಷಗಳನ್ನು ಈಗ ಆಶ್ರಮವಾಸದಲ್ಲಿ ಅವರು ಕಳೆದಿದ್ದರು. ಅತ್ಯುತ್ತಮ ಗ್ರಂಥಗಳ ವ್ಯಾಸಂಗದಲ್ಲಿ ತೊಡಗಿದ್ದರು. ಆತ್ಮೋನ್ನತಿಯ ಮಹಾಪ್ರಯತ್ನದಲ್ಲಿದ್ದರು. ಸುಸಂಸ್ಕೃತ ಸಂನ್ಯಾಸಿಗಳ ಸಹವಾಸ; ಸದಾ ದೈವ ಚಿಂತನೆ. ಒಂಭತ್ತು ವರುಷಗಳ ಕಾಲವನ್ನು ಕಠಿಣ ಬ್ರಹ್ಮಚರ್ಯಾಶ್ರಮದಲ್ಲಿದ್ದು ಕೆಲವೇ ವರುಷಗಳ ಕೆಳಗೆ ಕಲ್ಕತ್ತಾ ನಗರದಲ್ಲಿನ ಬೇಲೂರು ಮಠದಲ್ಲಿ ಸಂನ್ಯಾಸ ಆಶ್ರಮದ ದೀಕ್ಷೆಯನ್ನು ತೆಗೆದುಕೊಂಡಿದ್ದರು. ಸಚ್ಚಿದಾನಂದ ಸ್ವರೂಪಿಯಾದ ಭಗವಂತನ ಸಾಕ್ಷಾತ್ಕಾರದ ಮಾರ್ಗದಲ್ಲಿ ಅಡಿಯಿಟ್ಟ ಅವರು ಆನಂದತೀರ್ಥರೆಂಬ ಹೊಸ ಹೆಸರನ್ನು ಪಡೆದರು. ಅವರ ಪೂರ್ವಾಶ್ರಮದ ಹೆಸರು ನಗೇಂದ್ರನೆಂದು.

ಹೆಸರು ಬದಲಾದಮಾತ್ರಕ್ಕೆ ಮನುಷ್ಯನೇ ಸಂಪೂರ್ಣವಾಗಿ ವ್ಯತ್ಯಾಸ ಹೊಂದಲು ಹೇಗೆ ಸಾಧ್ಯ. ಮನುಷ್ಯನ ಗುಣ ಅವನ ಹೆಸರಿನ ಮೇಲೆ ಅವಲಂಬಿಸಿಲ್ಲ. ಆದರೂ ಅವರ ತಂದೆತಾಯಿಗಳು ಅವರಿಗೆ ಆ ಹೆಸರನ್ನು ಉದ್ದೇಶಪೂರ್ವಕವಾಗಿಯೇ ಇಟ್ಟಿದ್ದರು. ಇವರು ಆ ತಂದೆತಾಯಿಗಳಿಗೆ ಏಳನೇ ಮಗು. ಅಷ್ಟು ಮಕ್ಕಳಲ್ಲಿ ಉಳಿದವರೆಂದರೆ ಇವರು ಮಾತ್ರ. ಮಕ್ಕಳೆಲ್ಲರೂ ಹುಟ್ಟಿದ ನಾಲ್ಕಾರು ವರುಷ ಮಾತ್ರ ಬಾಳಿ, ಮೃತಹೊಂದುತ್ತಿದ್ದರು. ಮಕ್ಕಳೇ ಇಲ್ಲದೆ ಹೋಗಿದ್ದಲ್ಲಿ ಅದೊಂದು ರೀತಿಯಾಗಿರುತ್ತಿತ್ತು. ಆದರೆ ಹೀಗೆ ಕೆಲವು ಕಾಲ ತಂದೆತಾಯಿಗಳನ್ನು ಬಾಲಲೀಲೆಗಳಿಂದ ಒಲಿಸಿ, ಅವು ಅಳಿಯುತ್ತಿದ್ದುದು ಅವರನ್ನು ಮತ್ತಷ್ಟು ದುಃಖಕ್ಕೀಡುಮಾಡಿತ್ತು. ಹೀಗೆ ರುಚಿ ನೋಡಿಸಿ ಗೋಳಾಡಿಸುವುದು ದೇವರಿಗೆ ಇಷ್ಟವೆಂದು ಕಾಣುತ್ತದೆ. ಹಿಂದೂ ಸಂಸ್ಕೃತಿಯಾದರೋ ಅಂತಹ ಸಂದರ್ಭಗಳಲ್ಲಿಯೂ ದೇವರನ್ನು ಮೊರೆಹೊಗುವಂತೆ ಮಾಡುತ್ತದೆ. ಯಾರೋ ನಾಗರಕಾಟವೆಂದು ಹೇಳಿದರಂತೆ. ಅದಕ್ಕಾಗಿ ಆ ಬಡದಂಪತಿಗಳು ನಾಗರ ಪ್ರತಿಷ್ಠೆ, ಸಮಾರಾಧನಾದಿ ಕ್ರಿಯೆಗಳಲ್ಲಿ

ಇದ್ದಬದ್ದ ಆಸ್ತಿಗಳನ್ನು ಕಳೆದರು. ಅವಕ್ಕೆ ಪ್ರತಿಫಲವೂ ದೊರಕಿತೆಂದು ಹೇಳಬಹುದು. ನಾಗೇಂದ್ರರು ಉಳಿದುಕೊಂಡರು. ಅಲ್ಲದೆ ಒಳ್ಳೆಯ ಪ್ರತಿಭಾಶಾಲಿಯಾಗಿಯೂ ಕಂಡುಬಂದು ಸಣ್ಣ ವಯಸ್ಸಿನಲ್ಲಿಯೇ ಉತ್ತಮವಾದ ನಿಷ್ಠೆಯ ಜೀವನವನ್ನು ನಡಸುತ್ತಿದ್ದರು. ತಂದೆತಾಯಿಗಳಂತೆ ಇವರಿಗೂ ದೇವರಲ್ಲಿ ಅಗಾಧವಾದ ಭಕ್ತಿಯಿತ್ತು. ಅಷ್ಟೇ ಪ್ರೀತಿಯನ್ನು ತನಗೆ ಜನ್ಮವಿತ್ತ ತಂದೆತಾಯಿಗಳಲ್ಲಿಯೂ ಇಟ್ಟಿದ್ದರು. ತಾಯಿಯಲ್ಲಂತೂ ಹೆಚ್ಚು ಗೌರವವನ್ನೂ, ಭಕ್ತಿಯನ್ನೂ ಇಟ್ಟಿದ್ದರು. ಅದು ಅವರಲ್ಲಿ ಇಂದಿಗೂ ಅಚ್ಚಳಿಯದಂತೆ ಇದ್ದಿತು.

ದಿನಕಳೆದಂತೆ ಅವರ ವಿದ್ಯಾರ್ಜನೆಯೊಂದಿಗೆ ಜ್ಞಾನಾರ್ಜನೆಯನ್ನೂ ವೃದ್ಧಿಪಡಿಸಿಕೊಳ್ಳುತ್ತಿದ್ದರು. ಹೃದಯವೂ ವಿಶಾಲವಾಗತೊಡಗಿತು. ಆ ಸಣ್ಣ ವಯಸ್ಸಿನಲ್ಲಿ ಸಣ್ಣ ಪುಟ್ಟ ಕಾರ್ಯಗಳನ್ನು ಮಾಡಿಕೊಡುವುದರಿಂದ ಸುತ್ತಮುತ್ತಲಿನವರನ್ನು ಒಲಿಸಿಕೊಂಡಿದ್ದರು. ಅವರ ವಯಸ್ಸಿನ ಬಾಲಕರ ತಂಡವೊಂದು ಯಾವಾಗಲೂ ಅವರನ್ನು ಹಿಂಬಾಲಿಸುತ್ತಿತ್ತು.

ಊರಮುಂದೆ ಒಂದು ಹನುಮಂತರಾಯನ ಗುಡಿಯಿತ್ತು. ಆ ಗುಡಿಯ ಪ್ರಾಕಾರವು ಈ ಬಾಲಕರ ಕ್ರೀಡಾವನವಾಗಿತ್ತು. ಟಾಂಗಾ ಮುಂದೆ ಸಾಗುತ್ತಿದ್ದಂತೆ ಆ ಗುಡಿಯು ಆನಂದತೀರ್ಥರ ಕಣ್ಗೆ ಕಂಡುಬಂತು. ಅಲ್ಲಿ ಅವರು ಆ ಗೆಳೆಯರ ಗುಂಪಿನೊಂದಿಗೆ ಆಡಿದ ಆಟಗಳನ್ನು ನೆನಪಿಗೆ ತಂದುಕೊಂಡರು. ಒಮ್ಮೆ ಆ ಗುಡಿಯಲ್ಲಿ ದೇವರ ಧ್ಯಾನ ಮಾಡುತ್ತಾ ಒಂದೆಡೆಯಲ್ಲಿ ಗಂಟೆಗಳ ಕಾಲ ನಿಶ್ಚಲರಾಗಿ ಕುಳಿತುಬಿಟ್ಟರಂತೆ. ಬಾಲಕರು ಇವರನ್ನು ಹುಡುಕಿ ಸಾಕಾಗಿ, ಮನೆಗೆ ಹೋಗಿ ಈ ವಿಚಾರವನ್ನು ತಿಳಿಸಿದರು. ಅದು ಹಳೆಯ ಗುಡಿ; ಅಲ್ಲಿಯೇ ಮನೆಮಾಡಿಕೊಂಡಿದ್ದ ನಾಗರಹಾವೊಂದು ಅವರ ತಲೆಯ ಮೇಲೆ ಹೆಡೆಯಾಡಿಸುತ್ತಿರುವುದನ್ನು ನೋಡಿದ ಆ ಬಾಲಕರ ಗುಂಪು ಕಿಟ್ಟನೆ ಕಿರಚಿಕೊಂಡು, ಓಡಿಹೋಗಿ ಅವರ ತಂದೆತಾಯಿಗಳಿಗೆ ತಿಳಿಸಿದರಂತೆ. ಅವರುಗಳು ಗಾಬರಿಯಿಂದ ಇವರಿದ್ದೆಡೆಗೆ ಬಂದು ಯಾವ ತೊಂದರೆಗೂ ಒಳಗಾಗದೆ ಇದ್ದ ಬಾಲಕನನ್ನು ನೋಡಿ ಬಾಚಿ ತಬ್ಬಿಕೊಂಡು ಮುದ್ದಾಡಿದರು. ತಾಯಿಯು ಮಗನಿಂದ ಇನ್ನು ಮುಂದೆ ಮನೆಯನ್ನು ಬಿಟ್ಟು ಹೊರಗೆ ಬರಲೇಬಾರದೆಂದು ಮಾತು ತೆಗೆದುಕೊಂಡರು.

ಈ ವೇಳೆಗಾಗಲೇ ಶಾಲೆಯಲ್ಲಿ ಆರನೆಯ ತರಗತಿಯವರೆಗೂ ಓದಿದ್ದರು. ಪಠ್ಯ ಪುಸ್ತಕಗಳನ್ನು ಓದುವುದಕ್ಕಿಂತಲೂ ಹೆಚ್ಚಾಗಿ ಅವರಿಗೆ ಇತರ ಗ್ರಂಥಗಳನ್ನು ಓದುವುದರಲ್ಲಿ ಆಸಕ್ತಿ ಹೆಚ್ಚಾಗಿದ್ದಿತು. ಅದೇ ಶಾಲೆಯಲ್ಲಿ ಶ್ರೀನಿವಾಸರೆಂಬ ಮಾಸ್ತರರೊಬ್ಬರಿದ್ದರು. ಅವರು ಇವರಿಗೆ ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮುಂತಾದ ಮಹಾಪುರುಷರ ಜೀವನ ಚರಿತ್ರೆಗಳನ್ನು ತಂದುಕೊಡುತಿದ್ದರು. ಅಲ್ಲದೆ ಈ ಬಾಲಕರಿಗೆ ಹಿಡಿಸು ವಂತೆ ಇನ್ನೂ ಎಷ್ಟೋ ಸ್ವಾರಸ್ಯವಾದ ವಿಚಾರಗಳನ್ನು ತಿಳಿಹೇಳು ತ್ತಿದ್ದರು. ಒಮ್ಮೆ ಅವರು ವಿವೇಕಾನಂದರ ಜೀವನ ಚರಿತ್ರೆಯಲ್ಲಿ, "ಯಾರಿವನು?" ಎಂಬ ಭಾಗವನ್ನು ಹೇಳುತ್ತಿದ್ದಾಗ, ಭಾವಾನಾತರಂಗ ಗಳನ್ನು ತಡೆಯಲಾರದ' ನಾಗೇಂದ್ರನ ಕಣ್ಣುಗಳಲ್ಲಿ ಧಾರಾಕಾರಾವಾಗಿ ನೀರು ಸುರಿಯಿತಂತೆ. ವಿವೇಕಾನಂದರ ವೀರವಾಣಿಯು ಇವರಲ್ಲಿ ಶಾಶ್ವತವಾದ ಪರಿಣಾಮವನ್ನುಂಟುಮಾಡಿತ್ತು. ಭಾರತಮಾತೆಯಲ್ಲಿ ಅವರಿಗಿದ್ದ ಅತೀವ ವಾದ ಭಕ್ತಿಯೂ, ಜನಸೇವೆಗಾಗಿ ದುಡಿಯಿರೆಂದು ಹೇಳಿದ್ದ ಮಾತು ಗಳೂ ಇವರ ಮನಸ್ಸಿಗೆ ಚೆನ್ನಾಗಿ ಹಿಡಿದಿದ್ದಿತು. "Religion is the back-bone of India" (ಧರ್ಮವೇ ಭಾರತದೇಶದ ಬೆನ್ನುಮೂಳೆ) ಮತ್ತು ನಮ್ಮ ದೇಶದ ಅಭಿವೃದ್ಧಿ ಮತ್ತು ಸದ್ಗತಿ ಧರ್ಮ ಸಂಸ್ಥಾಪನೆಯ ಮೂಲಕವೇ ಸಾಧ್ಯ ಎಂಬ ಅವರ ಮಾತುಗಳನ್ನು ಅರ್ಥಮಾಡಿಕೊಂಡಿದ್ದ ನಾಗೇಂದ್ರರು ತಮ್ಮ ಇಡೀ ಜೀವನವನ್ನು ಆ ಮಹಾಕಾರ್ಯಕ್ಕೆ ಮುಡಿಪಿಟ್ಟು ಸೇವೆಗೈಯಬೇಕೆಂಬ ಆಸೆಯನ್ನಿಟ್ಟುಕೊಂಡಿದ್ದರು.

ತಾಯಿ, ನಾಗೇಂದ್ರನನ್ನು ಸದಾ ಹತ್ತಿರವೇ ಇರಬೇಕೆಂದು ಕೇಳಿ ಕೊಂಡಿದ್ದರು. ಅವರಿಗೆ ಅವನನ್ನು ಸುಮ್ಮನೆ ನೋಡುವುದರಲ್ಲಿಯೇ ಏನೋ ಆನಂದ ಅವನ ದೈವಭಕ್ತಿಯನ್ನು ಮತ್ತು ಸದ್ಗುಣಗಳನ್ನು ಕಂಡಿದ್ದ ಅವ ರಿಗೆ ತನ್ನ ಮಗ ಮುಂದೆ ಹಿರಿಯ ಜೀವಿಯಾಗಿ ಬಾಳುವನೆಂಬ ನಂಬಿಕೆ ಇತ್ತು. ಆದರೆ ತನ್ನ ಕಾರ್ಯಸಾಧನೆಗಾಗಿ ಎಲ್ಲಿ ತಮ್ಮನ್ನಗಲಿ ಮನೆಬಿಟ್ಟು ಹೊರಟು ಬಿಡುವನೋ ಎಂಬ ಭಯವಾವರಿಸಿತ್ತು. ಆದ್ದರಿಂದಲೇ ಅವರು ತಕ್ಕಷ್ಟು ಜಾಗರೂಕರಾಗಿದ್ದರು.

ತಂದೆತಾಯಿಗಳು ಎಷ್ಟೇ ಜಾಗರೂಕರಾಗಿದ್ದರೂ ವಿಧಿಯನ್ನು ಮೀರಿ ನಡೆಯಲಾದೀತೆ? ನಾಗೇಂದ್ರನ ಮನಸ್ಸು ಹಿರಿಯ ಆದರ್ಶಸಾಧನೆಯ ಕಡೆಗೇ ಸಾಗುತ್ತಿತ್ತು. ಶ್ರೀ ರಾಮಕೃಷ್ಣಾಶ್ರಮವನ್ನು ಸೇರಿ ಕಾರ್ಯೋನ್ಮುಖರಾಗಬೇಕೆಂಬಾಸೆ ಅತಿಯಾಯಿತು. ಈಗಾಗಲೇ ಅವರ ಪ್ರಕಟನೆಯ ಗ್ರಂಥಗಳೆಲ್ಲವನ್ನೂ ಓದಿ ಮನನ ಮಾಡಿಕೊಂಡಿದ್ದರು. ಮೈಸೂರಿಗೆ ಹೋಗಿ ಆಶ್ರಮವನ್ನು ಸೇರಿಬಿಡಬೇಕೆಂದು ಮನಸ್ಸು ಮಾಡಿಯೂ ಮಾಡಿದ್ದರು. ಆದರೆ ತಾಯಿಯ ಆಶೀರ್ವಾದವನ್ನೂ, ಅಪ್ಪಣೆಯನ್ನೂ ಪಡೆಯದೆ ಹೋಗುವುದಾದರೂ ಎಂತು?

ಹೊರಡುವ ದಿನ ರಾತ್ರಿ ಯಾವ ರೀತಿಯಿಂದಲಾದರೂ ತಾಯಿಗೆ ತಾನು ಹೊರಡುವುದನ್ನು ತಿಳಿಸಬೇಕೆಂದುಕೊಂಡರು. ಊಟಮಾಡುತ್ತಾ ಕುಳಿತಿದ್ದರು. ಅಂದಿನ ಊಟ ಎಂದಿಗಿಂತ ಹೆಚ್ಚು ರುಚಿಯಾಗಿ ಕಂಡುಬಂತು. ಆದರೆ ಮನಸ್ಸಿನಲ್ಲಿ ಯಾವುದೋ ಒಂದು ತರಹವಾದ ಸಂಕಟವಾಗುತ್ತಿತ್ತು. ತಾಯಿ ತುಪ್ಪ ಬಡಿಸಲು ಬಂದರು. ಆಕೆಯ ಮಮತೆಯ ಮನೆಯಾಗಿದ್ದ ಮುಖವನ್ನು ನೋಡಿದಾಗ ನಾಗೇಂದ್ರರಿಗೆ ಕಣ್ಣಿನಲ್ಲಿ ನೀರೂರಿತು.

"ಅಮ್ಮಾ ಇನ್ನೂ ಸ್ವಲ್ಪ ತುಪ್ಪ ಹಾಕಮ್ಮ. ಇನ್ನೆಂದು ಹಾಕುವೆ" ಎಂದು ಹೇಳಿದರು.

"ಯಾಕೆ ಮಗೂ ಹಾಗೆ ಹೇಳುವೆ. ಹಾಗೆಲ್ಲಾ ಹೇಳಬಾರದಪ್ಪ" ತಾಯಿ ಎಂದರು. ಆಕೆಯ ಕಣ್ಣುಗಳಿಂದಲೂ ಒಂದೆರಡು ತೊಟ್ಟು ನೀರು ಉದುರಿತು.

"ಮಗೂ ಈಚೆಗೆ ಬಹಳ ವ್ಯತ್ಯಾಸಹೊಂದುತ್ತಿದ್ದಾನೆ. ಎಲ್ಲಿಯಾದರು ಇರಲಿ. ಸುಖವಾಗಿದ್ದರೆ ಸಾಕು" ಎಂದು ತಾಯಿಯು ತಂದೆಯ ಬಳಿ ಹೇಳುತ್ತಿದ್ದುದನ್ನು ಕೇಳಿದ ಇವರು ಅಂದು ರಾತ್ರಿಯೇ ಮೈಸೂರಿಗೆ ಹೊರಟುಬಿಟ್ಟರು. ಇಂದು ಅವುಗಳ ನೆನಪುಗಳಲ್ಲಿ ಮೈಮರೆತ ಇವರಿಗೆ, ಮುಂದೆ ಗಾಡಿಯನ್ನು ಎತ್ತ ಹೊಡಿಯಬೇಕೆಂದು ತಿಳಿಯದೆ ಗಾಡಿಯವನು ಚೌಕದಲ್ಲಿ ಗಾಡಿಯನ್ನು ನಿಲ್ಲಿಸಿಬಿಟ್ಟದ್ದು ಗಮನಕ್ಕೆ ಬರಲೇ ಇಲ್ಲ.

ಆ ಚೌಕದಲ್ಲಿ ಹಾದು ಹೋಗುತ್ತಿದ್ದ ಸುಂದರ ಯುವತಿಯೊಬ್ಬಳು ಇವರ ಕಡೆ ದೃಷ್ಟಿಬೀರಿದಳು. ತನ್ನ ಕೈಲಿದ್ದ ಮಗುವನ್ನು ಕುರಿತು ಅಂದಳು,

"ಆನಂದ, ಅತ್ತನೋಡು ಯಾರದು ?"

ಸ್ವಾಮೀಜಿಯೂ, ನೋಡಿದರು. ಧ್ವನಿಯ ಗುರುತುಹತ್ತತೊಡಗಿತು.

"ಇದೇನು ಯಾವಾಗ ಬಂದಿರಿ" ಎಂದಳು ಆಕೆ.

"ಈಗ ತಾನೆ"

"ಮನೆಯತ್ತ ದಯಮಾಡಿ, ನನ್ನ ಯಜಮಾನರಿಗೆ ತುಂಬ ಸಂತೋಷವಾಗುತ್ತದೆ..........ಮಗು ಆನಂದ ಅವರಿಗೆ ನಮಸ್ಕಾರ ಮಾಡು" ಎಂದು ತನ್ನೆರಡು ಕೈಗಳಿಂದ ಮಗುವಿನ ಎರಡು ಕೈಗಳನ್ನೂ ಜೋಡಿಸಿ, ತಾನೂ ನಮಸ್ಕಾರ ಮಾಡಿ ಹೊರಟು ಹೋದಳು.

ಹೃದಯದ ಯಾವುದೋ ಮೂಲೆಯಲ್ಲಿ ಅಡಗಿದ್ದ ಹೊಸ ಭಾವನಾ ತರಂಗವೊಂದು ಮೇರೆಯರಿಯದಂತೆ ಹರಿಯತೊಡಗಿತು. ಆಕೆಯೊಂದಿಗೆ ಕೂಡಿಯಾಡಿದ ದಿನಗಳು ನೆನಪಿಗೆ ಬಂದವು. ಎಲ್ಲರಂತೆ ತಾನೂ ಸಂಸಾರಿಯಾಗಿ ಜೀವಿಸಲು ಇಷ್ಟವಿದ್ದಲ್ಲಿ ಈ ಸೌಂದರ್ಯದ ಮುದ್ದೆಯಂತಿದ್ದ ಆಕೆಯನ್ನು ಪಡೆಯಬಹುದಾಗಿತ್ತು. 'ಆನಂದ'ನನ್ನು ಆಡಿಸಬಹುದಾಗಿದ್ದಿತು. "ಇದೇನು ಹುಚ್ಚು" ನಾನೂ ಹೀಗೆ ಯೋಚಿಸಬಹುದೇ ಎಂದುಕೊಂಡು ಟಾಂಗಾದವನ ಕಡೆಗೆ ತಿರುಗಿ, ಗಾಡಿಯನ್ನು ಹಿಂದಕ್ಕೆ ತಿರುಗಿಸಬೇಕೆಂದು ಹೇಳುವುದರಲ್ಲಿದ್ದರು. ಆದರೆ ಹೆತ್ತತಾಯನ್ನು ಒಮ್ಮೆಯಾದರೂ ನೋಡುವ ಆಸೆ ಅವರನ್ನು ಇನ್ನೂ ಬಿಟ್ಟಿರಲಿಲ್ಲ. ಹೀಗೆ ಗಾಡಿಯನ್ನು ಹೊಡಿ ಎಂದು ಬೊಟ್ಟುಮಾಡಿ ತೋರಿಸಿದರು.

ತಂದೆಯ ಮನೆ ಹತ್ತಿರವಾಗತೊಡಗಿತು. ಇವರು ಎಷ್ಟೇ ಗಂಭೀರವಾಗಿ ಕುಳ್ಳಿರಲು ಪ್ರಯತ್ನಪಟ್ಟರೂ, ದೇಹದಲ್ಲೆಲ್ಲಾ ಆನಂದದ ಸಂಚಾರವಾಗಿ ಪುಲಕಿತರನ್ನಾಗಿ ಮಾಡಿತು. ನೋಡುತ್ತಾರೆ ಮನೆಯ ಪಕ್ಕದಲ್ಲಿದ್ದ ಬೈಲಿನಲ್ಲಿ ಕೆಲವು ಹಿರಿಯರ ಗುಂಪೊಂದು ಸ್ವಾಗತಿಸಲು ನಿಂತಿದ್ದಾರೆ. ಅವರಲ್ಲಿ ಹಿರಿಯ ವ್ಯಕ್ತಿಯೊಬ್ಬರು ಆನಂದತೀರ್ಥರನ್ನು ಆದರದಿಂದ ಮಾತ

ನಾಡಿಸಿದರು; ಅವರೇ ತನಗೆ ಪ್ರಥಮ ಗುರುವಾಗಿದ್ದ ಶ್ರೀನಿವಾಸ ಮಾಸ್ತರರು. ತನ್ನ ಶಿಷ್ಯ ಉತ್ತಮ ವ್ಯಕ್ತಿಯಾಗಿ ಬಾಳುತ್ತಿದ್ದುದನ್ನು ಕಂಡು ಬಹಳ ಆನಂದಪಟ್ಟರು. ಅವರಲ್ಲಿ ಇವರಿಗೆ ತುಂಬಾ ಗೌರವವಿದ್ದರೂ, ಈ ಸ್ವಾಗತ ಸಮಿತಿ ಈ ಮಂಟಪಗಳ ಆಡಂಬರಕ್ಕೆ ಸಂಕೋಚಪಟ್ಟರು. ಅಲ್ಲದೆ ಆ ಸಭೆಯಲ್ಲಿ ಮಾತನಾಡಬೇಕೆಂದು ಬೇರೆ ಒತ್ತಾಯ ಮಾಡುತ್ತಿದಾರೆ. ಮನಸ್ಸಿಗೆ ತುಂಬಾ ಬೇಸರವಾಯಿತು. ಆದರೆ ಸಾವಿರಾರು ಮಂದಿ ನೆರೆದ ಸಭೆಗೆ ಅವಮಾನ ಮಾಡುವುದೂ ಸರಿಯಲ್ಲ.

ಮಾತನಾಡತೊಡಗಿದರು. ಯಾವ ವಿಚಾರವಾಗಿ ಮಾತನಾಡುವುದು? ಏನು ಹೇಳುವುದು? ಯಾವ ವಿಚಾರವೋ ಹೇಳುತ್ತ ಹೊರಟರು. ವಾಗ್ಝರಿಯು ಲೀಲಾಜಾಲವಾಗಿ ಹರಿಯತೊಡಗಿತು. ನೆರೆದಿದ್ದ ಜನರೆಲ್ಲರೂ ನಿಶ್ಶಬ್ದದಿಂದ ಕೇಳತೊಡಗಿದರು. ಕೆಲವರ ಕಣ್ಣುಗಳಲ್ಲಿ ನೀರೂರಿತು.

"......................ಎಲ್ಲ ಪ್ರೀತಿಗೂ ಮಿಗಿಲೆನಿಸುವುದು ಮಾತೃ ವಾತ್ಸಲ್ಯ. ಅದು ನಿಷ್ಕಳಂಕ ದೈವಿಕ ಪ್ರೇಮ. ಅದಕ್ಕೆ ಸ್ವಾರ್ಥತೆಯ ಸೋಂಕಿಲ್ಲ. ಆದರೆ ನಮ್ಮ ಹಿಂದೂ ತಾಯಿಗೆ ಹೃದಯದ ವಿಶಾಲತೆ ಅಗತ್ಯವಿದೆ. ಇತರರನ್ನು ತಮ್ಮ ಮಕ್ಕಳೇ ಎಂದು ತಿಳಿದರೆ ನಿಷ್ಕಪಟಿಗಳೂ ಸ್ವತಂತ್ರರೂ ಆದ ಹೊಸ ಜನಾಂಗವನ್ನೇ ಸೃಷ್ಟಿಮಾಡಲು ಸಾಧ್ಯವಾದೀತು. ಈ ಸಂದರ್ಭದಲ್ಲಿ ಶ್ರೀಮಾತೆಯ ಜೀವನದಲ್ಲಿಯ ಒಂದು ಘಟನೆಯನ್ನು ಹೇಳಿ ಮುಗಿಸುವೆನು. ಒಮ್ಮೆ ಮುಂಜಾವಿನಲ್ಲಿಯೇ ಎದ್ದು ಊರಿಗೆ ಹತ್ತಾರು ಮೈಲಿ ದೂರ ನಡೆದು ಹೋಗಿ ಒಬ್ಬ ರೈತನ ಮನೆಯಲ್ಲಿ ಹಾಲು ಕೊಂಡರು ಶ್ರೀಮಾತೆ.

ಆತ ಪ್ರಶ್ನಿಸಿದ 'ತಾಯಿ, ನೀವು ಇಷ್ಟು ದೂರ ಏಕೆ ಬಂದಿರಿ. ನಿನ್ನೆ ತಿಳಿಸಿದ್ದರೆ ನಾನೇ ಬರುತ್ತಿದ್ದೆ'

'ಹೌದಪ್ಪಾ, ಹಾಗೇ ಮಾಡಬಹುದಾಗಿತ್ತು. ಆದರೆ ನೆನ್ನೆ ತಾನೆ ನಮ್ಮ ಹುಡುಗ ಮೈಸೂರಿನ ಕಡೆಯಿಂದ ಬಂದ. ಅತ್ತ ಕಡೆ ಕಾಫಿ ಚಟ ಹೆಚ್ಚು. ಬೆಳಗ್ಗೆ ಎದ್ದು ಕಾಫಿ ಕೊಡದಿದ್ದರೆ ಹೇಗಪ್ಪ............'

" ಹೌದು. ಗುರುದೇವನಿದ್ದ ಸ್ಥಳವನ್ನು ನೋಡಲು, ಗುರುಪತ್ನಿ ಶ್ರೀಮಾತೆ ಶಾರದಾಮಣಿದೇವಿಯ ದರ್ಶನಕೊಳ್ಳಲು ಮೈಸೂರಿನಿಂದ ಹೋಗಿದ್ದವರು ಯಾರೋ ಅಪರಿಚಿತ ಸಂನ್ಯಾಸಿ............ "

ಇಷ್ಟರಲ್ಲಿ ತನ್ನ ತಾಯಿ ಆ ಗುಂಪಿನ ಮಧ್ಯದಿಂದ ಎದ್ದು, ಹೃದಯದಲ್ಲಿ ಉಂಟಾದ ಆನಂದವನ್ನು ತಡೆಯಲಾರದೆ ಹೊರಟು ಹೋಗುತ್ತಿರುವುದನ್ನು ಆನಂದತೀರ್ಥರು ನೋಡುತ್ತಾರೆ.

ಸಭೆ ಮುಗಿದ ಮೇಲೆ, ತಮ್ಮ ಮನೆಯತ್ತ ಬಿಜಯಮಾಡಿದರು. ಅವರ ತಂದೆತಾಯಿಗಳು ಬಂದು ಭಕ್ತಿಯಿಂದ ಒಳಗೆ ಬರಮಾಡಿಕೊಂಡರು. ಇಂದು ಆನಂದತೀರ್ಥರಿಗೆ ಬೇಕಾಗಿದ್ದುದು ಈ ಸತ್ಕಾರಗಳಲ್ಲ; ಹಿಂದೆ ಅವರು ಆಡುತ್ತಿದ್ದ ವಾತ್ಸಲ್ಯದ ಮಾತುಗಳು. ತಂದೆತಾಯಿಗಳೊಂದಿಗೆ ಸರಿಯಾಗಿ ಮಾತನಾಡಲು ಬಿಡುವಿಲ್ಲ. ಊರಿನ ಹಿರಿಯರ ಹಾವಳಿ. ಪ್ರಶ್ನೆಗಳ ಮೇಲೆ ಪ್ರಶ್ನೆ. ಮಲಗುವವರೆಗೂ ಅವರುಗಳು ಮನೆ ಬಿಡಲಿಲ್ಲ.

ರಾತ್ರಿ ಸರಿಹೊತ್ತು. ಎಲ್ಲರೂ ನಿಶ್ಶಬ್ದವಾಗಿ ಮಲಗಿದಾರೆ. ಆದರೆ ಆನಂದತೀರ್ಥರಿಗೆ ಮಾತ್ರ ನಿದ್ರೆ ಹತ್ತಲಿಲ್ಲ. ತಾಯಿಯ ಗೀಳು ಅವರಿಗಿನ್ನೂ ಬಿಟ್ಟಿರಲಿಲ್ಲ. ಹೊರಳಾಡಿದರು; ದೇವರ ಪ್ರಾರ್ಥನೆ ಮಾಡಿದರು. ಅಲ್ಲಿಯೂ ಸಹ, ತಾಯಿಯ ಮೂರ್ತಿಯು ಸ್ಮೃತಿಪಥದಲ್ಲಿ ಬಂದು ನಿಲ್ಲುತ್ತಿತ್ತು. ಕೊನೆಗೆ ಮಲಗಿದ್ದ ತಾಯಿಯನ್ನು ಎಬ್ಬಿಸಿಯಾದರೂ ಮಾತನಾಡಲೇ ಬೇಕೆಂದು ಪ್ರತಿಜ್ಞೆಮಾಡಿ ಆಕೆಯ ಕೋಣೆಯ ಹತ್ತಿರ ನಡೆದರು. ಅತ್ತಲಿಂದ ಕರೆ ಬರುತ್ತಿತ್ತು.

" ಮಗೂ............ಮಗೂ ........... "

ಈ ಧ್ವನಿಯನ್ನು ಕೇಳುವುದಕ್ಕಾಗಿಯೇ ಅಲ್ಲವೇ ಅವರು ಅಷ್ಟು ಕಾತುರರಾಗಿದ್ದುದು.

" ಅಮ್ಮಾ............ಅಮ್ಮಾ............ " ಎಂದರು.

" ಮಗೂ ನೀನು ಹೇಳದುದು ಸತ್ಯವಪ್ಪಾ "

" ಏನಮ್ಮಾ.......... "

“ ನನ್ನ ಸ್ವಾರ್ಥಕ್ಕಾಗಿಯಲ್ಲ ದೇವರು ಕನಿಕರಿಸಿ ಏಳನೆಯ ಮಗು ವಾಗಿ ನಿನ್ನನ್ನು ಕೊಟ್ಟದು. ಜನತಾಸೇವೆ ಮಾಡಪ್ಪಾ, ಲೋಕೋದ್ಧಾರದ ಜೊತೆಗೆ ಆತ್ಮೋದ್ಧಾರವೂ ತಾನಾಗಿಯೇ ಆಗುವುದು. ”

ಆನಂದತೀರ್ಥರ ಕಣ್ಣುಗಳು ಅರಳಿದವು. ಮುಖವು ಪ್ರಫುಲ್ಲಿತ ವಾಯಿತು. ತನ್ನ ತಾಯಿಯು ಹೀಗೆ ಮನಸಾರೆ ತನ್ನ ಒಪ್ಪಿಗೆಯನ್ನು ಕೊಡುತ್ತಾಳೆಂದು ತಿಳಿದಿರಲಿಲ್ಲ. ತಾಯಿಯ ಆಶೀರ್ವಾದವೂ ದೊರೆಯಿತು. ಇನ್ನೇನು.

“ ನಮಸ್ಕಾರಾಮ್ಮಾ ಅಂತೆಯೇ ಮಾಡುವೆನು. ನಿನ್ನ ಅನುಮತಿ ಗಾಗಿಯೇ ನಾನು ಇಷ್ಟು ದೂರ ಬಂದುದು. ”

“ ಎಲ್ಲಿಯಾದರೂ ಚೆನ್ನಾಗಿ ಬಾಳಪ್ಪಾ ” ಎಂದು ಅರನಿದ್ದೆಯಲ್ಲಿದ್ದ ತಾಯಿಯು ನುಡಿದಳು.

* * * * *

ಆನಂದತೀರ್ಥರು ಬೆಳಗಿನ ಜಾವದಲ್ಲಿಯೇ ಎದ್ದು ಹೊರಟುಬಿಟ್ಟರು. ಅವರ ಮನಸ್ಸು ಈಗ ಶಾಂತವಾಗಿತ್ತು. ಅಲ್ಲಿ ನಿಂತಿದ್ದ ಟಾಂಗಾದವನನ್ನು ಕರೆದು ಟಾಂಗಾವನ್ನು ಹತ್ತಿದರು.

“ ಎಲ್ಲಿಗೆ ಹೊಡೆಯಲಿ ” ಎಂದ.

“ ಮುಂದೆ, ಮುಂದೆ ಹೊಡಿ ” ಎಂದರು ಅವರು.

“ ಹೋ, ಇವರು ಅದೇ ಸ್ವಾಮೀಜಿ ‘ಭಲೋ ಬೇಟಾ ಭಲೋ ” ಎಂದು ಕುದುರೆಯ ಬೆನ್ನು ಚಪ್ಪರಿಸಿದ ಗಾಡಿಯವ.



# ಎಷ್ಟಾದರೂ ಒಬ್ಬ ತಾಯಿಯ ಮಕ್ಕಳಲ್ಲವೇ ?

ನಾಗರತ್ನಳು ನನ್ನ ಸೋದರಮಾವನ ಮಗಳು. ಮನೆಯ ಮೆಚ್ಚಿನ ಮಗಳು. ಅವಳ ಮನಸೆಳೆಯುವ ಮುದ್ದು ಮಾತುಗಳು, ಹಾಡುತ್ತಿದ್ದ ಮಂಜುಳರವದ ಇಂಪಾದಗಾನ ಇವು ಯಾರನ್ನೇ ಆಗಲಿ ಆಕರ್ಷಿಸದೆ ಬಿಡುತ್ತಿರಲಿಲ್ಲ. ತಾನು ಓದುತ್ತಿದ್ದ ಶಾಲೆಯಲ್ಲಿಯೂ ಸಹ ಗಾಂಭೀರ್ಯದಿಂದ ನಡೆದುಕೊಂಡು ಉಪಾಧ್ಯಾಯರೆಲ್ಲರ ಮೆಚ್ಚಿಕೆಗೆ ಪಾತ್ರವಾಗಿದ್ದಳು. ಇವಳು ಪ್ರವೇಶಿಸಿದ ಯಾವ ಸ್ಪರ್ಧೆಯಲ್ಲಿಯೇ ಆಗಲಿ ಪ್ರಥಮ ಬಹುಮಾನ ಇವಳಿಗೇ ಮೀಸಲಾಗಿರುತ್ತಿತ್ತು. ಸಂಗೀತವೆಂದರೆ ರತ್ನಳಿಗೆ ದೈವದತ್ತವಾಗಿತ್ತು. ಆಕೆಯ ಶಾರೀರ ಮಧುರವಾಗಿತ್ತು. ಧ್ವನಿ ಫಲಿಕಿಸುವುದನ್ನು ಕೇಳಿ ನೋಡಬೇಕು. ಸಂಗೀತಪ್ರತಿಭೆಗೆ ಬಹುಮಾನವಾಗಿ ಬಂದ ಸ್ವರ್ಣಪದಕವು ಆಕೆಯ ಎದೆಯಲ್ಲಿ ವಿರಾಜಿಸುತ್ತಿದ್ದಿತು. ವರುಷವಿನ್ನೂ ಹದಿನೈದು ಮೀರದಿದ್ದರೂ ಪ್ರೌಢ ವಯಸ್ಸಿನ ಸುಂದರಿಯಂತೆ ಕಾಣುತ್ತಿದ್ದಳು.

ಆಕೆಯ ತಮ್ಮ ಅಚ್ಯುತನಿಗೆ ಹತ್ತು ವಯಸ್ಸು ಮೀರದಿದ್ದರೂ ಹತ್ತಾರು ಕಡೆಗಳಲ್ಲಿ ಅವನ ಪ್ರಚಂಡತನವನ್ನು ಕಾಣಬಹುದಾಗಿದ್ದಿತು. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎಂಬ ಗಾದೆ ಇವನಿಗೆ ಸರಿಹೊಂದಿತ್ತು. ಯಾವ ಮಕ್ಕಳ ಗುಂಪಿನಲ್ಲಿಯೇ ನೋಡಲಿ ಇವನದೇ ಅಧಿಕಾರ. ಇವತ್ತು ಊರ ಹೊರಗಿನ ತೋಟದಲ್ಲಿ ಮಾವಿನ ಕಾಯಿಗಳನ್ನು ಲೂಟಿಮಾಡುವುದು, ನಾಳೆ ಪಕ್ಕದ ಮನೆಯಲ್ಲಿನ ಚಕ್ಕೋತದ ಕಾಯಿಗಳನ್ನು ಉಡಾಯಿಸುವ ಯೋಚನೆ, ಹೀಗಿತ್ತು ಅವನ ಕಾರ್ಯಕ್ರಮ. ಇವನ ಈ ಚೇಷ್ಟೆಗಳಲ್ಲಿ ಪ್ರಾಣಕ್ಕೇ ಊನ ಬರುವಂತಹ ಪ್ರಸಂಗಗಳು ಎಷ್ಟೋ ಒದಗಿದ್ದವು. ಇವನ ತಾಯಿ ಯಾವ ಗಳಿಗೆಯಲ್ಲಿ ಅಚ್ಯುತನೆಂಬ ಹೆಸರನ್ನು ಇಟ್ಟಿದ್ದರೋ ಎಲ್ಲದರಲ್ಲಿಯೂ ಅ-ಚ್ಯುತ (ಚ್ಯುತಿಯಿಲ್ಲದವನು) ನೇ ಆದ. ಮನೆಯಲ್ಲಿಯೂ ಇವನ ಹಾವಳಿಯನ್ನು ತಡೆಯಲಾಗುತ್ತಿರಲಿಲ್ಲ. ಇಟ್ಟಿದ್ದ ತಿಂಡಿಯು ಅಲ್ಲಿಯೇ

ಮಾಯವಾಗಿರುತ್ತಿತ್ತು. ಅಪ್ಪನ ಆಫೀಸಿನ ಕಾಗದಗಳು ಎಷ್ಟೋವೇಳೆ ಗಾಳೀಪಟದ ರೂಪಾಂತರ ಹೊಂದಿ ಆಕಾಶದಲ್ಲಿರುತ್ತಿದ್ದಿತು. ಇವನ ಈ ಚೇಷ್ಟೆಗಳನ್ನು ಕಾಯಬೇಕಾದರೆ ತಾಯಿಗೆ ಸಾಕುಬೇಕಾಗಿ ಹೋಗುತ್ತಿದ್ದಿತು. ರತ್ನಳನ್ನಂತೂ ಗೋಳುಕರೆಯಿಸಿಬಿಡುತ್ತಿದ್ದನು. ಅವಳ ಪುಸ್ತಕಗಳಲ್ಲಿ ಗೀಚಿ ಹಾಳುಮಾಡುವುದು, ವೀಣೆಯ ತಂತಿಗಳನ್ನು ಕಡಿದು ತೊಂದರೆ ಮಾಡು ವುದು ಅವನ ಸಾಮಾನ್ಯ ಚೇಷ್ಟೆಯಾಗಿದ್ದಿತು.

ಅವರ ಮನೆಗೆ ಹೋದಾಗಲೆಲ್ಲಾ ಪೆಪ್ಪರ್‌ಮೆಂಟ್ ಮುಂತಾದುದನ್ನು ಹುಡುಗರಿಗಾಗಿ ತೆಗೆದುಕೊಂಡು ಹೋಗುವ ಪದ್ಧತಿಯಿಟ್ಟಿದ್ದೆ. ಅವರಿಗೂ ಗೊತ್ತು. ನಾನು ಬಂದಾಗ ತಮಗೆ ಏನಾದರೂ ತಿಂಡಿ ದೊರೆಯುತ್ತದೆಯೆಂದು. ಮನೆಯ ಒಳಗೆ ಬಂದಕೂಡಲೇ ನನ್ನನ್ನು ಮುತ್ತಿಗೆ ಹಾಕಿಬಿಡುತ್ತಿದ್ದರು. ಆದರೆ ಇತ್ತೀಚೆಗೆ ರತ್ನಳಲ್ಲಿ ಗಂಭೀರತೆ ಬಂದುಬಿಟ್ಟಿದ್ದಿತು. ತಾರುಣ್ಯಕ್ಕೆ ಕಾಲಿಟ್ಟೊಡನೆ ಲಜ್ಜೆತನ ಆವರಿಸುವುದು ಹೆಣ್ಣಿಗೆ ಸಹಜವಲ್ಲವೆ.

" ಪೆಪ್ಪರ್‌ಮೆಂಟ್ ತಂದಿದ್ದೀಯ ಮಾಮ...." ಎಂದ ಅಚ್ಯುತ.

" ಪೆಪ್ಪರ್‌ಮೆಂಟ್ ಕೇಳು, ಪೆಪ್ಪರ್‌ಮೆಂಟ್. ಓದು ಬರಹ ಕೇಳಬೇಡ. ಯಾವುದಾದರೂ ಪುಸ್ತಕ ತಂದುಕೊಡಿ ಎಂದು ಕೇಳುವುದು ಬಿಟ್ಟು ಪೆಪ್ಪರ್ ಮೆಂಟಂತೆ ನಾಚಿಕೆಯಾಗೊಲ್ಲ. ಇನ್ನೂ ಪಾಪನಪ್ಪೊಪ್ಪು ಕೇಳು...."

" ನನಗೇಕೆ ನಾಚಿಕೆ? ನಿನಗೆ. ನೀನು ಕೇಳು ಪುಸ್ತಕಾನ. ಪುಸ್ತಕ ಹಿಡಿದು ಮೂಲೆ ಕೂಡೋಕೆ ಹೆಂಗಸರೇನೆ ನಾವು. ಕೆಲಸದಲ್ಲಿ ತೋರಿಸು ತ್ತೀವೆ ಪೌರುಷಾನ ನಾವು ಗಂಡಸರು. "

ಅವನ ಮಾತಿನ ಮುಂದೆ ಅವಳು ಪೆಚ್ಚಾದಳು. ಅಲ್ಲದೆ ಮೊನ್ನೆತಾನೆ ಬಸಪ್ಪಶಾಸ್ತ್ರಿಗಳ ಶಾಕುಂತಲನಾಟಕ ಬೇಕೆಂದು ನನ್ನಿಂದ ತರಿಸಿಕೊಂಡಿದ್ದಳು. ನಾಚಿಕೆಯಿಂದ ಮುಖ ಕೆಂಪಾಯಿತು. ತಲೆ ತಗ್ಗಿಸಿದಳು.

" ಭಾಪರೆ, ನಿಜವಯ್ಯಾ ನೀನು ಗಂಡಸು. ಇಂದೇನು ಮಹಾ ಕಾರ್ಯ ಮಾಡಿದ್ದೀಯ ಹೇಳು ನೋಡೋಣ " ಎಂದೆ ನಾನು.

" ಹಾಗೆ ಬಾ ಮತ್ತೆ....ನಮ್ಮ ಟೈಮೂರ್ ಗೊತ್ತೊ ? "

ಟೈಮೂರ್ ? ಯಾರೋ ? ಒಡನೆ ನೆನಪಿಗೆ ಬರಲಿಲ್ಲ. ಚರಿತ್ರೆಯಲ್ಲಿ ಬರುವ ವ್ಯಕ್ತಿಯೆಂದು ಕಾಣುತ್ತೆ. ನಾನು ಚರಿತ್ರೆಯನ್ನು ಓದಿ ಹತ್ತು

ವರುಷವಾಗುತ್ತಾ ಬಂದಿತ್ತು; ನೆನಪಿನಲ್ಲಿರಬೇಕು. ಹಾಗೂ ಕಷ್ಟಪಟ್ಟು ಜ್ಞಾಪಿಸಿಕೊಳ್ಳಲು ಪ್ರಯತ್ನಿಸಿದೆ.

" ಟ್ರೈಮೂರ್‌ಲಂಗ್ ಏನೋ " ಎಂದೆ.

" ಅಲ್ಲವೋ ನಮ್ಮ ಟ್ರೈಮೂರ್....ಕುಂಟಾ ಕಾಣೋ ಐಂಗಾರಿ. "

ಟ್ರೈಮೂರ್ ಕುಂಟ. ಐಂಗಾರಿ ಸರಿ.

" ಮುಂದೆ ? " ಎಂದೆ.

" ಪಚ್ಚಡಿ ಆಚಾರಿ ಗೊತ್ತುತಾನೆ ? "

ಸರಿ ಮುಗೀತು. ಅರ್ಥವಾದಹಾಗೆ ಆಯಿತು.

" ಸರಿಯಾಗಿ ಬಿಡಿಸಿ ಹೇಳಪ್ಪ. ನನಗೆ ಅರ್ಥವಾಗಲ್ಲ " ಎಂದೆ.

" ಹಾಂ, ಹಾಗೆ ಬಾ. ನೋಡಿದಿಯೇನೇ ರತ್ನಾ ನಿನ್ನ ಯಜಮಾನರು ಬಿ. ಎಸ್‌ಸಿ. ಓದಿರೋದು. ತಿಂದಾ ನೋಡು ಗಸ್ತು " ಎಂದು ಹುಬ್ಬಾರಿಸುತ್ತಾ ಅಕ್ಕನಕಡೆ ನೋಡಿದ.

ಇವನ ನಗೆಯಾಟ ಅವಳಿಗೆ ಸರಿಬೀಳಲಿಲ್ಲ. ಅವನಕಡೆ ದುರುದುರನೆ ಕಣ್ಣುಬಿಡುತ್ತಾ, ತುಟಿ ಕಚ್ಚಿಕೊಂಡಳು, ಇನ್ನೇನುತಾನೆ ಮಾಡಿಯಾಳು. ನಾನು ಮಧ್ಯೆ ಬಾಯಿಹಾಕಿ ಹೇಳಿದೆ.

" ಅವಳಸುದ್ದಿ ಇರಲೋ. ನಿಮ್ಮ ಪಚ್ಚಡಿ, ಟ್ರೈಮೂರ್ ಹೇಳು " ಎಂದೆ.

" ಪಚ್ಚಡಿ ಆಚಾರೀಗೂ ಟ್ರೈಮೂರಗೂ ಲಟಾಪಟಿ " ಎಂದು ಹೇಳಿದ.

" ಯಾತಕ್ಕೋ ಜಗಳಾ ? " ಎಂದೆ.

" ಟ್ರೈಮೂರ್ ನಮ್ಮ ಹೆಡ್‌ಮಾಸ್ತರಿಗೆ ಇಟ್ಟಿರೋ ಹೆಸರು. ಪಚ್ಚಡಿ ಆಚಾರ್‌ರು ನನ್ನ ತರಗತಿಯ ಉಪಾಧ್ಯಾಯರು. ಅವರ ಎರಡು ತಿಂಗಳ ಸಂಬಳ ಹೆಡ್‌ಮಾಸ್ಟರು ಹ್ಯಾಗೋ ನುಂಗಿಹಾಕಿದ್ದಾರಂತೆ ನೋಡು. "
ಇವನಿಗೆ ಶಾಲೆಯ ರಾಜಕೀಯ ಬೇರೆ ತಿಳಿಯುತ್ತೆ; ಸರಿಯಪ್ಪ ಎಂದುಕೊಂಡು

" ನಿನಗೆ ಹೇಗೆ ತಿಳಿಯಿತೋ ? "

" ಅದೇ ನೋಡು ವಿಚಾರ " ಎಂದ.

" ಸರಿ. ನೀವೇನುಮಾಡಿದ್ದು ಮಹಾಪುರುಷರು. "

" ಹೆಡ್‌ಮಾಸ್ಟರಿಗೆ ಮಾಡಿದೆವು ಸರಿಯಾಗಿ "

" ಅಂದರೆ ? "

" ಅಂದರೇನು. ನೆನ್ನೆ ಬಂದರು ನಮ್ಮ ಕ್ಲಾಸಿಗೆ, ಜಬರ್‌ದಸ್ತ್ ಮಾಡಿಕೊಂಡು, ಜರತಾರಿ ಪಂಚೆ ಉಟ್ಟುಕೊಂಡು ಆರಾಮವಾಗಿ ಕುಳಿತುಕೊಂಡರು ಕುರ್ಚಿಮೇಲೆ. ಕ್ಲಾಸ್ ಮುಗೀತು. ಹೊರಟರು. ಹಿಂದೆ ಅಂಟಿತ್ತು K. K. K. ಚೀಟಿ. "

" ಹಾಗೆಂದರೆ ? " ಎಂದೆ.

" ಸರಿ. ನಿನಗೆ ಏನೂ ಗೊತ್ತಾಗುವುದಿಲ್ಲ. K. K. K ಅಂದರೆ ಕಂಡೋರನ್ನ ಕೆಣಕೋ ಕಾಡುಕಪಿ ಎಂತ. ಈಗ ಅರ್ಥವಾಯಿತೆ ? " ಎಂದ.

" ಸರಿಯಪ್ಪಾ. ಮುಂದೆ " ಎಂದೆ.

" ಮುಂದೇನು. ಸ್ಕೂಲು ಸ್ಕೂಲೇ ಕೂಗಿಕೊಂಡಿತು. 'K. K. K ಗೆ ಜೈ. ಜೈ ' ಎಂದು "

ಆ ಹುಡುಗಿಯೊಂದಿಗೆ ಮಾತನಾಡಲು ನನಗೆ ಚಪಲ. ಆದರೆ ಈ ಪ್ರಚಂಡನ ನಡುವೆ ಅದು ಸಾಧ್ಯವಾಗುತ್ತಿರಲಿಲ್ಲ. ಒಮ್ಮೆ ಸಮಯ ಕಾದು ಅವಳೊಬ್ಬಳೇ ಇರುವಾಗ ಮಾತನಾಡುವ ಧೈರ್ಯಮಾಡಿದೆ. ಈ ನಡುವೆ ಅವಳಿಗೋ ಮಾತಿಗೆ ಮುಂಚೆ ಗಾಭರಿ. ಬಾಗಿಲು ಹಿಂದೆ ನಿಂತು ಉತ್ತರ ಕೊಡಲು ತೊಡಗಿದಳು.

" ನಿನ್ನೆ ಹೋಗಿದ್ದ ಹಾಸ್ಪಿಟಲ್ ಚಲನಚಿತ್ರ ಚೆನ್ನಾಗಿರಲಿಲ್ಲವೆ ? " ಎಂದೆ.

" ಹೂಂ "

" ಅಂದರೆ ? "

" ಚೆನ್ನಾಗಿತ್ತು. "

" ಕರ್‌ನನ್ ಬಾಲಾ ಚೆನ್ನಾಗಿ ಹಾಡುತ್ತಾಳೆ ? "

" ಹೂಂ "

" ಅಂದರೆ ? "

" ಒಳ್ಳೆ ಅಂದರೆ ? "

" ಒಳ್ಳೆ ಹೂಂ "

" ಚೆನ್ನಾಗಿ ಹಾಡುತ್ತಾಳೆ, ಈಗ ಸರಿಹೋಯಿತೇನು ? "

" ಅಲ್ಲಾ, ಅವಳು ಹಾಡಿದಳಲ್ಲಾ 'ಪ್ರಭೂಜೀ' ಎಂಬುವ ಹಾಡು. ಅದು ಬಹು ರಮ್ಯವಾಗಿದೆ. ನೀನು ಕಲಿತೆಯಾ " ಎಂದೆ.

" ಹಾಗೇನು ಅದರ ಅರ್ಥ. ಇನ್ನೂ ಇಲ್ಲ. "

" ನೋಡು ನೀನು ಹಾಡುವುದನ್ನು ಕೇಳುವುದಕ್ಕೆ ನನಗೆ...."

" ಸೇರಿಬಿಟ್ಟರು ಗಂಡಾ ಹೆಂಡತಿ " ಎಂದು ಕಿರುಚುತ್ತಾ ಬಂದುಬಿಟ್ಟ, ಶಿವಪೂಜೆ ಮಧ್ಯೆ ಕರಡಿ ಬಿಟ್ಟಹಾಗೆ ನಮ್ಮ ಅಚ್ಯುತ. ಮುಗಿಯಿತಲ್ಲಾ ಇನ್ನು.

ಒಂದು ಶುಭದಿನ ಇವರ ಮನೆಗೆ ಯಾರೋ ದಯಮಾಡಿಸಿದ್ದರು. ಯಾರೋ ಏನು. ಕನ್ಯಾರ್ಥಿ—ವರ, ಅವನ ತಂದೆ–ನನ್ನ ಸೋದರಮಾವ ನೊಡನೆ ಮಾತನಾಡುತ್ತಾ ಮಹಡಿಯ ಮೇಲೆ ಕುಳಿತಿದ್ದರು. ನನ್ನ ಸೋದ ರತ್ತೆ ಹೊಸ ಹೊಸ ತಿಂಡಿಗಳನ್ನು ಬಿಸಿಬಿಸಿಯಾಗಿ ಮಾಡುತ್ತಾ ಅಡಿಗೆ ಮನೆಯಲ್ಲಿದ್ದರು. ಅವರಿಗೆ ಸಹಾಯ ಮಾಡುತ್ತಾ ರತ್ನಳೂ ಅಲ್ಲಿಯೇ ಇದ್ದಳು. ಅಚ್ಯುತನ ಜಾಗ ಅಡಿಗೆಯ ಮನೆಯೆ? ಅವನು ಹೊರಟಿದ್ದ ಹುಡುಗರ ತಂಡದೊಡನೆ ಗೋಲಿಯಾಡುವುದಕ್ಕೆ. ಒಮ್ಮೆ ಹಾಗೂ ಬಿಡುವು ಮಾಡಿಕೊಂಡು ಅಡಿಗೆ ಮನೆಯಲ್ಲಿ ಒಂದು ಗಸ್ತು ಹಾಕಲು ಬಂದ. ಏನೂ ದೊರೆಯುವಂತೆ ತೋರಲಿಲ್ಲ. ಮಹಡಿಯ ಮೇಲೆ ಒಂದು ಸಲ ಹೋಗಿ ಬಂದ. ಬಂದವರನ್ನು ನೋಡಿದ. ಎಲ್ಲಾ ಅರ್ಥವಾಯಿತೆಂದು ಕಾಣುತ್ತೆ. ಕೋಣೆಗೆ ಹೋಗಿ ಕೆಲವು ಪುಸ್ತಕಗಳನ್ನು ಆಯ್ದು ಅವುಗಳಲ್ಲಿ ಏನೇನೋ ಗೀಚಿ ಅಡಿಗೆ ಮನೆಗೆ ತಂದ. ಅದನ್ನು ರತ್ನಳ ಮುಂದೆ ಹಿಡಿದು,

" ಏನೇ ಕರೀಗಂಡನ್ನ ಮೆಚ್ಚಿ ಆಗಲೇ ನಿನ್ನ ಪುಸ್ತಕದ ತುಂಬಾ ಅವನ ಹೆಸರನ್ನ ಗೀಚಿದ್ದೀಯ " ಎಂದ.

" ಅಯ್ಯೋ ನೋಡಮ್ಮಾ...." ಎಂದು ಕಿರಿಚಿದಳು ಅವಳು.

" ಏನೇ ನಿಮ್ಮ ಗಲಾಟೆ. ಮನೆಗೆ ಯಾರಾದರೂ ಬಂದಿದ್ದಾರೆ, ಗಂಭೀರ ವಾಗಿರಬೇಕು ಎನ್ನುವುದು ತಿಳಿಯುವುದೇ ಇಲ್ಲ ನಿಮಗೆ. ಯಾವಾಗಲೂ ಒಂದೆ " ಎಂದು ಗದ್ದರಿಸಿದರು ತಾಯಿ.

ತನ್ನಾಟ ಅಲ್ಲಿ ನಡೆಯದಿರಲು ಮತ್ತೆ ಹೊರಟ ಆಟಕ್ಕೆ ಅಚ್ಯುತ ರಾಯ. ಊಟದ ಸಿದ್ಧತಯೆಲ್ಲಾ ಮನೆಯಲ್ಲಿ ಪೂರೈಸಿದ್ದರೂ ಅವನು ಹಿಂತಿರುಗಲಿಲ್ಲ. ಅವನನ್ನು ಕರೆಯಲು ಬಂದಳು ರತ್ನ.

" ಬಾರೋ, ಊಟಕ್ಕೆ ಎಲೆ ಹಾಕಿದ್ದಾರೆ "

" ನಾನು ಈಗಲೇ ಬರುವುದಿಲ್ಲಾ ಹೋಗು "

" ಗೊತ್ತಾಗೊಲ್ಲವೇನೋ ? ಅವರೆಲ್ಲಾ ಬಂದಿದ್ದಾರೆ ! ಬಾ "

" ನಿನ್ನ ಗಂಡ ಬಂದರೆ ನಿನಗೆ ಹೆಚ್ಚು, ನನಗೇನು ಹೋಗೇ "

" ಹಾಗೆಲ್ಲಾ ಅಂತೀಯಾ, ಅಮ್ಮನಿಗೆ ಹೇಳಿ ಚೆನ್ನಾಗಿ ಬಿಗಿಸುತ್ತೇನೆ "

" ಹೇಳು ಹೋಗು. ಯಾರು ಬೇಡಾ ಎಂದರು "

" ಹೇಳಲಾ...."

" ಬೇಡಾ...."

ಏನು ಕೋಪ ಬಂದಿತೋ ಕೈಲಿದ್ದ ಬುಗರಿಯನ್ನು ಅವಳಕಡೆಗೆ ಬೀಸಿದ ಅದು ಅವಳ ಹಣೆಗೇ ತಗುಲಬೇಕೇ? ಗಾಯವಾಗಿ ರಕ್ತ ಸುರಿಯಲಾರಂಭಿಸಿತು. ಅಳುತ್ತಾ ಹಿಂತಿರುಗಿದರು. ಈ ಗದ್ದಲವನ್ನು ಕೇಳಿ ವಿಚಾರಿಸಲು ಊಟಕ್ಕೆ ಕುಳಿತಿದ್ದ ತಂದೆಯವರೂ ಎದ್ದು ಬಂದರು. ಸರಿ ಅವರ ಹಿಂದೆ ಬಂದರು ಬಂದಿದ್ದವರು. ವಿಚಾರ ತಿಳಿಯಿತು. ಶುಭಕಾರ್ಯಕ್ಕೆ ಬಂದ ದಿನ ರಕ್ತ ಕಾಣುವುದೇ? ಸರಿ. ಗಂಟು ಮೂಟೆ ಕಟ್ಟಿ ಊರಿಗೆ ಹೊರಟೇ ಬಿಟ್ಟರು ಬಂದಿದ್ದ ಬೀಗರು. ಎಲ್ಲವೂ ಒಂದು ಘಟ್ಟಕ್ಕೆ ಬಂತೆಂದು ನೆಮ್ಮದಿಯಾಗಿದ್ದ ದಂಪತಿಗಳಿಗೆ ಈ ಸಣ್ಣ ವಿಷಯದಿಂದ ಎಲ್ಲವೂ ತಲೆಕೆಳಕಾದುದನ್ನು ಕಂಡು ಹುಡುಗನ ವಿಚಾರದಲ್ಲಿ ಕೆಂಡದಂತಾದರು. ತಾಯಿಗಂತೂ ವಿಪರೀತ ಕೋಪ ವುಂಟಾಯಿತು. ಆ ಉದ್ವಿಗ್ನಾವಸ್ಥೆಯಲ್ಲಿ ಹುಡುಗನಿಗೆ ಚೆನ್ನಾಗಿ ಬಿಗಿದು ಒಂದು ಕೋಣೆಯಲ್ಲಿ ಕೂಡಿಹಾಕಿದರು. ಅಷ್ಟರಲ್ಲಿ ನಾನೂ ಬಂದಿದ್ದೆ. ಅವಳ ಹಣೆಗೆ ಬ್ಯಾಂಡೇಜನ್ನು ಕಟ್ಟಿ, ಹಾಸಿಗೆಯಲ್ಲಿ ಮಲಗಿಸಿದೆವು. ಮಧ್ಯಾಹ್ನ ಸ್ವಲ್ಪ ಜ್ವರವೂ ಕಾಣಿಸಿಕೊಂಡಿತ್ತು.

ಸಂಜೆಯಾಯಿತು. ಮನೆಯಲ್ಲಿ ನಡೆದ ಅವಾಂತರದಿಂದ ಗಡಿಬಿಡಿಯೆಲ್ಲ ಈಗ ಶಾಂತವಾಗಿತ್ತು. ತಾಯಿಯು ಪಕ್ಕದ ಮನೆಯ ಹೆಂಗಸರೊಂದಿಗೆ ಮನೆಯ ಪುರಾಣ ಹೇಳಿ ಕೇಳುವುದರಲ್ಲಿ ಮಗ್ನರಾಗಿದ್ದರು. ತಂದೆಯ ಮನಸ್ಸು

ಕೆಟ್ಟು ಆಚೆ ಹೊರಟುಬಿಟ್ಟಿದ್ದರು. ಅಷ್ಟುಹೊತ್ತಿಗೆ ಸ್ವಲ್ಪ ಎಚ್ಚರಾಗಿದ್ದ ರತ್ನಳು ಎದ್ದಳು. ನಡೆದ ಘಟನೆ ಜ್ಞಾಪಕಕ್ಕೆ ಬಂತು. ಮುಂದೆ ನಡೆದ ವಿಚಾರವನ್ನು ಊಹಿಸಿದಳು. ಸುತ್ತಮುತ್ತಲೂ ನೋಡಿದಳು. ತಮ್ಮನ ಸುಳಿವು ಕಾಣಿಸಲಿಲ್ಲ. ಹುಡುಕಿದಳು. ಕಾಣಲಿಲ್ಲ. ಕೋಣೆಯೊಂದರಿಂದ 'ಅಮ್ಮಾ....ಅಮ್ಮಾ....ಅಕ್ಕಾ' ಎಂಬ ಧ್ವನಿಯು ಕೇಳಿಸಿತು. ಬಾಗಿಲ ಸಂದಿನಲ್ಲಿ ಇಣಿಕಿ ನೋಡಿದಳು.

ಅಚ್ಯುತನು ಮೊದಲೇ ಬಹು ಹಸಿವೆಯಿಂದ ಬಳಲಿದ್ದ. ಅಲ್ಲದೆ ಪೆಟ್ಟು ಗಳನ್ನು ತಿಂದುದರ ನೋವು ತಿಂದಿದ್ದ. ಅವನು ಅತ್ತು ಅತ್ತು ಸಾಕಾಗಿ ಸ್ವಲ್ಪ ಕಾಲ ಹಾಗೆಯೇ ಮಲಗಿಬಿಟ್ಟಿದ್ದ. ಎಚ್ಚರಾದಾಗ ಹಸಿವೂ ನೋವೂ ಮತ್ತಷ್ಟು ಹೆಚ್ಚಾಗಿ ಕಂಡು ಸಂಕಟವಾಗತೊಡಗಿತು. "ಅಮ್ಮಾ...ಅಕ್ಕಾ...." ಎನ್ನ ತೊಡಗಿದ. ತನ್ನ ತಪ್ಪು ಅರಿವಾಗಿತ್ತು. ಆದರೆ ತಾನು ಬುಗುರಿಯನ್ನು ಎಸೆದಾಗ ಹೀಗಾಗುವುದೆಂದು ಭಾವಿಸಿರಲಿಲ್ಲ. ಅಕ್ಕನೂ ಅದೇ ರೀತಿಯಲ್ಲಿ ಯೋಚಿಸಿದ್ದಳು. ತಮ್ಮನೂ ಇನ್ನೂ ಹಸಿದಿರುವುದನ್ನು ತಿಳಿದು ಕನಿಕರ ದಿಂದ ಕಣ್ಣಿನಲ್ಲಿ ಕಂಬನಿ ಮೂಡಿತು. ಕೋಣೆಯ ಬಾಗಿಲು ಬೀಗ ಹಾಕಿದ್ದು ದರಿಂದ ಏನು ಮಾಡಲೂ ತೋರದೆ ಯೋಚಿಸತೊಡಗಿದಳು. ಒಂದು ಉಪಾಯ ಹೊಳೆಯಿತು. ಒಂದು ಹಗ್ಗವನ್ನು ತಂದು ಅದರ ಸಹಾಯದಿಂದ ತಮ್ಮನನ್ನು ಕಳ್ಳಬಾಗಿಲ ಮೂಲಕ ಬಿಸಲು ಮಾಳಿಗೆಗೆ ಸಾಗಿಸಿಕೊಂಡಳು.

ಈ ವೇಳೆಗೆ ಅವರ ತಾಯಿಯು ಮನೆಗೆ ಹಿಂತಿರುಗಿ ಬಂದರು. ನೋಡು ತ್ತಾರೆ ರತ್ನಳು ಹಾಸಿಗೆಯಲ್ಲಿಲ್ಲ. ಗಾಬರಿಯಾಯಿತು. ಮೊದಲೇ ಗಾಬರಿ ಸ್ವಭಾವದ ಮನುಷ್ಯರು. ಮಗುವಿನ ಜ್ಞಾಪಕವಾಗಿ ಆ ಕೋಣೆಯ ಬಾಗಿ ಲನ್ನು ತೆರದು ನೋಡುತ್ತಾರೆ; ಅವನೂ ಅಲ್ಲಿಲ್ಲ. ಸರಿ ಹುಚ್ಚುಚ್ಚಾದರು. ನನ್ನನ್ನೂ ಕರೆಯಿಸಿ ಓಡಿಯಾಡಿಸಿಬಿಟ್ಟರು. ನಾನು ಹೇಳಿದೆ, 'ಅವಳೆಲ್ಲೋ ತನ್ನ ಸಂಗಾತಿಯರ ಮನೆಗೆ ಹೋಗಿರಬಹುದು. ಕತ್ತಲಾಗುವುದರಲ್ಲಿ ಬರು ತ್ತಾಳೆ ಸುಮ್ಮನಿರಿ' ಎಂದು.

"ಜ್ವರ ಬೇರೆ ಇತ್ತಲ್ಲಪ್ಪಾ"

"ಈಗ ಬಿಟ್ಟಿರಬಹುದು. ನೋವಿನ ಜ್ವರ ಅಷ್ಟೆ. ಯೋಚಿಸಬೇಡಿ."

"ಅಲ್ಲಪ್ಪಾ ನಿಮಗೆಲ್ಲಾ ಗೊತ್ತಾಗುವುದಿಲ್ಲ. ಹೆಣ್ಣಿನ ಮನಸ್ಸು. ಏನು ತಿಳಿದುಕೊಂಡಳೋ ಏನೋ. ಎಲ್ಲಿಗೆ ಹೊರಟುಬಿಟ್ಟಳೋ"

ಆ ಮದುವೆಯ ವಿಚಾರದಲ್ಲಿ ರತ್ನಳ ಮನಸ್ಸು ಏನೆಂಬುದನ್ನು ನಾನು ಸ್ವಲ್ಪ ತಿಳಿದಿದ್ದೆ. ಅವರ ಮಾತಿಗೆ ನಗುಬಂತು. ಆದರೂ ಅವರ ಮನಸ್ಸಿಗೆ ಯಾಕೆ ನೋವನ್ನು ಉಂಟುಮಾಡಬೇಕೆಂದುಕೊಂಡು. " ಹೋಗಲಿ ಮನೆ ಯಲ್ಲೆಲ್ಲಾ ಇನ್ನೊಮ್ಮೆ ಹುಡುಕಿ ನೋಡಿಬಿಡಿ " ಎಂದೆ. ಅವರು ನೇರವಾಗಿ ಬಿಸಲು ಮಾಳಿಗೆಯಕಡೆಗೇ ಹೊರಟರು. ಬಿಸಲು ಮಾಳಿಗೆಗೆ ಇದ್ದ ಬಾಗಿ ಲನ್ನು ಓರೆಮಾಡಿ ನೋಡುತ್ತಾರೆ ; ಕಂಡುದೇನು ಗೊತ್ತೇ ?

ಸಂಧ್ಯಾಸೂರ್ಯನು ಆಗತಾನೆ ಅಸ್ತಮಿಸುತ್ತಿದ್ದ. ಸಂಜೆಗೆಂಪು ಎಲ್ಲೆಡೆ ಯಲ್ಲಿಯೂ ಆವರಿಸಿತ್ತು. ರತ್ನಳು ಅಂದು ಉಟ್ಟಿದ್ದ ಹಸರು ಸೀರೆ ಆಕೆಯ ಸುಂದರಕಾಯಕ್ಕೆ ಒಪ್ಪುವಂತಿತ್ತು. ತೊಡೆಯ ಮೇಲೆ ತಮ್ಮನ ತಲೆಯನ್ನು ಇಟ್ಟು ಅವನ ಬಾಯಿಗೆ ತನಗಾಗಿ ಹಾಸಿಗೆ ಬಳಿ ಇಟ್ಟಿದ್ದ ದ್ರಾಕ್ಷಿ ಹಣ್ಣನ್ನು ಒಂದೊಂದಾಗಿ ಹಾಕುತ್ತಾ ಹೇಳುತ್ತಿದ್ದಳು.

" ಅಚ್ಚಣ್ಣಾ, ನೋಡು. ನೀನು ಹಾಗೆ ಮಾಡಿದುದು ತಪ್ಪಲ್ಲವೆ ? "

" ಹೂಂ ".

" ಇನ್ನುಮೇಲೆ ಹಾಗೆಲ್ಲಾ ಚೇಷ್ಟೆ ಮಾಡುವುದನ್ನು ಬಿಟ್ಟುಬಿಡು "

" ಹೂಂ "

" ನಿನ್ನಿಂದ ಎಷ್ಟು ತೊಂದರೆಯಾಯಿತು ಗೊತ್ತೆ ? "

" ಹೂಂ "

" ಹೂಂ, ಏನು ? ಬಂದಿದ್ದವರು ಹೊರಟುಹೋದರು. "

" ಅದರಿಂದ ನಿನಗೇನೂ ನಷ್ಟವಿಲ್ಲವಲ್ಲಾ, ಮಾವ...."

ಆಕೆ ಅವನ ಬಾಯನ್ನು ತನ್ನ ಕೋಮಲ ಕೈಗಳಿಂದ ಮುಚ್ಚಿ ಅವನ ಕಪೋಲಗಳಿಗೆ ಒಂದು ಮುದ್ದಿಟ್ಟಳು. ಮುಖ ಕೆಂಪಾಯಿತು.

"ನೋಡು....ಆ ನಿನ್ನ ಮಾವ....ಅವರೆದುರಿಗೆ ನೀನು ಹಾಗೆಲ್ಲಾ ಹಾಸ್ಯ ಮಾಡಬೇಡಪ್ಪಾ "

ಇಲ್ಲಾ ಅಕ್ಕ "

“ ನನ್ನತ್ತ ತಿರುಗಿ ಎಂದರು ನನ್ನ ಸೋದರತ್ತೆ. “ ನೋಡೋ ಎಷ್ಟೇ ಆಗಲಿ ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರಲ್ಲವೇನೋ ” ಎಂದು. ನಾನು ಅದಕ್ಕೆ ಉತ್ತರ ಹೇಳುವ ಅವಶ್ಯಕತೆಯಿಲ್ಲ ಅಲ್ಲವೇ ? ರತ್ನಳಕಡೆಗೆ ನೋಡಿದೆ. ಅವಳ ಮುಖದ ಮೇಲೆ ಗುಂಗುರು ಕೂದಲುಗಳು ಆಡುತ್ತಿದ್ದುದು ಮತ್ತಷ್ಟು ಕಳೆಯನ್ನು ಕೊಟ್ಟಿತ್ತು. ಅವಳ ಬೆಳಗುತ್ತಿದ್ದ ಕಣ್ಣಿನ ದೃಷ್ಟಿ ನನ್ನ ದೃಷ್ಟಿಯಲ್ಲಿ ಬೆರೆಯಿತು. ಅಂದಿನ ಆ ದೃಶ್ಯವನ್ನು ಎಂದಿಗೂ ಮರೆಯಲಾರೆ.

---

# ಕೈಲಾಸಮ್‌ರ ಕೃತಿಗಳು

## ಇದುವರೆಗೆ ಮುದ್ರಿಸಿದ್ದು

ಗಂಡಸ್ಕತ್ರಿ
ತಾವರೆಕೆರೆ
ಅಮ್ಮಾವ್ರಗಂಡ
ವೈದ್ಯನ ವ್ಯಾಧಿ
ಸೀಕರ್ಣೆ ಸಾವಿತ್ರಿ
ಪೋಲೀ ಕಿಟ್ಟೀ
ಸತ್ತವನ ಸಂತಾಪ

ಹೋಂ ರೂಲು
ಅನುಕೂಲಕ್ಕೊಬ್ಬಣ್ಣ
ನಂಕ್ಲಬ್ಬು
ಟೊಳ್ಳುಗಟ್ಟಿ
ನಮ್ ಕಂಪ್ನಿ
ಬಹಿಷ್ಕಾರ
PURPOSE

**Little Lays and Plays**



## ಮುಂಬರುವ ಕೃತಿಗಳು

ತಾಳೀಕಟ್ಟೊಕ್ಕೂಲೀನೇ
ಬಂಡ್ವಾಳ್ವಿಲ್ಲದ ಬಡಾಯಿ
ಹುತ್ತದಲ್ಲಿ ಹುತ್ತ
KARNA
ಬ್ರಾಹ್ಮಣಿಕೆ
ಸೂಳೆ

ಅಹೋಬ್ಲು's auto-car
ಮೊಮ್ಮಗಳ ಮುಯ್ಯಿ
ರಾಮಣ್ಣ ವೀ. ಸೀ.
ಕೇರಳ ಯಾತ್ರೆ
ಬೆಂಡೋಲೆ ಫಂಡು
Up to-date ಅಮ್ಮಯ್ಯ


ಪ್ರಕಾಶಕರು :

**ಮಾಧವ ಸನ್ಸ್**

ಮದ್ರಾಸ್ ಬೆಂಗಳೂರು

